೨೦೦೦ - ೨೦೦೧

# ಬ್ಯಾಂಕಿಂಗ್ ಪ್ರಪಂಚ

ಹಣ, ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ



ವಾರ್ಷಿಕ ಚಂದಾ
ರೂ. ೨೦-೦೦
ಆಜೀವ ಚಂದಾ
ರೂ. ೨೦೦-೦೦

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨, ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು - ೫೬೦ ೦೦೨

# ಸಂಪಾದಕರ ಬಿನ್ನಹ

'ಬ್ಯಾಂಕಿಂಗ್ ಪ್ರಪಂಚ'ವೇಕೆ ಇದ್ದಕ್ಕಿದ್ದ ಹಾಗೆ ಅದೃಶ್ಯವಾಗಿದೆ? 'ದಾಸರೆಂದರೆ ಪುರಂದರದಾಸರಯ್ಯ' ಎಂಬ ಹಾಗೆ, 'ಪ್ರಪಂಚವೆಂದರೆ ಬ್ಯಾಂಕಿಂಗ್ ಪ್ರಪಂಚವಯ್ಯ' ಎನ್ನುವ ರೀತಿಯಲ್ಲಿ ತಪ್ಪದೆ ಹೊರಬರುತ್ತಿದ್ದ 'ಬ್ಯಾಂಕಿಂಗ್ ಪ್ರಪಂಚ' ಎರಡು ವರ್ಷಗಳಿಂದ ಕಾಣೆಯಾಗಿದೆ - ಎಂದು ಅನೇಕ ಓದುಗರೂ, ಬ್ಯಾಂಕಿಂಗ್ ವಿಚಾರದಲ್ಲಿ ಆಸಕ್ತರಾದವರೂ ಕನ್ನಡಪ್ರೇಮಿಗಳೂ ತಮ್ಮ ಆತಂಕವನ್ನು ವ್ಯಕ್ತಪಡಿಸುತ್ತಿದ್ದಾರೆ. ಸರಸ್ವತೀ ನದಿಯಂತೆ ಇದು ನೆಲದ ಅಡಿಯಲ್ಲಿ ಬತ್ತಿಹೋಯಿತೆ? 'ಬ್ಯಾಂಕಿಂಗ್ ಪ್ರಪಂಚ'ವನ್ನು ಹರತರುವ ಹೊಣೆ ಹೊತ್ತ ಕಾರ್ಯಕರ್ತರ ಉತ್ಸಾಹ ಇಂಗಿಹೋಯಿತೆ? ಹಾಗಾಗಿದ್ದರೆ ಇದೊಂದು ಮಹಾ ದುರಂತವೆಂದು ಹಲವರು ಹಲುಬುತ್ತಿದ್ದಾರೆ. ಇಡೀ ಭಾರತದಲ್ಲಿ ಭಾರತೀಯ ಭಾಷೆಯೊಂದರಲ್ಲಿ ಬ್ಯಾಂಕಿಂಗ್ ಮತ್ತು ಹಣ ಕುರಿತ ವಿಚಾರಗಳಿಗೆ ಮೀಸಲಾಗಿದ್ದ ಪತ್ರಿಕೆ ಇದೊಂದೇ. ಹಿಂದಿಯಲ್ಲಿ ಕೂಡ, ಪ್ರಭುತ್ವದ ವಿಶೇಷವಾದ ಪ್ರೋತ್ಸಾಹವಿದ್ದರೂ, ಇಂಥ ಪತ್ರಿಕೆ ಪ್ರಕಟವಾಗುತ್ತಿಲ್ಲ. ಇದು ಕನ್ನಡದ ಹೆಮ್ಮೆ ಎಂದು ಭಾವಿಸುತ್ತ ಬಂದವರು ಹಲವರು. ಪತ್ರಿಕೆ ಅಂತರ್ಧಾನವಾದ್ದರಿಂದ ಅವರಿಗೆಲ್ಲ ಆಗಿರುವ ನಿರಾಶೆ, ಅಸಮಾಧಾನ, ದುಃಖ ಅಪಾರ.

ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಪ್ರಕಟವಾಗುತ್ತ ಬಂದ 'ಬ್ಯಾಂಕಿಂಗ್ ಪ್ರಪಂಚ'ದಿಂದಾಗಿ ಕನ್ನಡದಲ್ಲಿ ಇಂಥ ವಿಚಾರವನ್ನು ಕುರಿತು ಬರೆಯಬಲ್ಲವರ ತಂಡವೊಂದರ ನಿರ್ಮಾಣವಾಗಿದೆ. ಬೇರಾವ ಭಾಷೆಯಲ್ಲೂ ಬಾರದ ಅನೇಕ ಹೊಸ ಹೊಸ ವಿಷಯಗಳನ್ನು ಆವಿಷ್ಕಾರಗಳನ್ನು ಆಚರಣೆಗಳನ್ನೂ ಪರಿಕಲ್ಪನೆಗಳನ್ನೂ ಕುರಿತ ಲೇಖನಗಳು 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟವಾಗಿವೆ. ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧವಾದ ಅನೇಕ ವಿಷಯಗಳಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು ಬ್ಯಾಂಕಿಂಗ್ ಪ್ರಪಂಚ ಟಂಕಿಸಿ ಪ್ರಚಾರಕ್ಕೆ ಕೊಟ್ಟಿದೆ. ಅನೇಕ ಇಂಗ್ಲಿಷ್ ಲೇಖನಗಳ ಭಾಷಾಂತರಗಳನ್ನೂ ಪ್ರಕಟಿಸಿದೆ. ನಾವು ಮಾಡಿದ್ದೆಲ್ಲ ಸಂಪೂರ್ಣವಾಗಿ ಸಮರ್ಪಕ ಎಂದು ನಾವು ಹೇಳಲಾರೆವು. ಆದರೆ ಪ್ರಥಮ ಪ್ರಾಮಾಣಿಕ ಪ್ರಯತ್ನವೆಂದು ನಾವು ಸಮಾಧಾನಪಟ್ಟುಕೊಂಡಿದ್ದೇವೆ. ಮುಂದೆ ಈ ಕುರಿತ ಚಿಂತನೆ ನಡೆಸುವವರಿಗೆ, ಲೇಖನ ಬರೆಯುವವರಿಗೆ, ವಿಚಾರವಿನಿಮಯ ಮಾಡುವವರಿಗೆ ಸಹಾಯವಾಗುವಂತೆ ಕಾಡುಕಡಿದು ಹಾದಿ ನಿರ್ಮಿಸುವುದರಲ್ಲಿ 'ಬ್ಯಾಂಕಿಂಗ್ ಪ್ರಪಂಚ'ದ ಯತ್ನ ಸಫಲಗೊಂಡಿದೆ. 'ಬ್ಯಾಂಕಿಂಗ್ ಪ್ರಪಂಚ' - ಎಷ್ಟೇ ಅಡೆತಡೆಗಳಿದ್ದರೂ - ನಿಯತವಾಗಿ ಹೊರಬರುತ್ತಿದ್ದಾಗ ಅದನ್ನು ಅಷ್ಟೇನೂ ಗಮನಿಸದಿದ್ದ ಅನೇಕರು, ಅದು ಬಾರದಿರುವಾಗ ಯಾವುದೋ ಶೂನ್ಯ ಉಂಟಾಗಿದೆಯೆಂದು ಭಾವಿಸತೊಡಗಿದ್ದಾರೆ. 'ಬ್ಯಾಂಕಿಂಗ್ ಪ್ರಪಂಚ' ನಿಲ್ಲಬಾರದು, ಅದು ಪ್ರಕಟವಾಗಬೇಕು ಎಂಬ ಆಶಯ ವ್ಯಕ್ತಪಡಿಸುತ್ತಿದ್ದಾರೆ.

'ಬ್ಯಾಂಕಿಂಗ್ ಪ್ರಪಂಚ' ಯಾರೊಬ್ಬರ ದುಡಿಮೆಯ ಫಲವಲ್ಲ. ಅದು ಒಂದು ರೀತಿಯಲ್ಲಿ ಸಮಷ್ಟಿ ಪ್ರಜ್ಞೆಯ ಪ್ರತೀಕ. ಅವರಿವರನ್ನು ಅವಲಂಬಿಸದೆ ತಾವೇ ಸ್ವಪ್ರಯತ್ನದಿಂದ ಇದನ್ನು ಹೊರತರಬೇಕೆಂಬ ಹಂಬಲದುಂಬಿದ, ಸಂಕಲ್ಪದಿಂದ ಕೂಡಿದ ತಂಡದ ಅವಿರತ ದುಡಿಮೆಯಿಂದ ಪತ್ರಿಕೆ ಪ್ರಕಟವಾಗುತ್ತ ಬಂತು. ಇದಕ್ಕೆ ಹಿನ್ನೆಲೆಯಲ್ಲಿ ಪ್ರತಿ ಆರು ತಿಂಗಳುಗಳಿಗೆ ಒಂದರಂತೆ ನಡೆಸುತ್ತಿದ್ದ 'ಬ್ಯಾಂಕಿಂಗ್ ಕಮ್ಮಟ'ದಲ್ಲಿ ಮಂಡಿತವಾಗಿ, ಕಮ್ಮಟದ ಸದಸ್ಯರ ಪರಿಶೀಲನೆ ಹಾಗೂ ವಿಮರ್ಶೆಗೆ ಒಳಪಟ್ಟು, ಪರಿಷ್ಕೃತವಾದ ಲೇಖನಗಳನ್ನು 'ಬ್ಯಾಂಕಿಂಗ್ ಪ್ರಪಂಚ' ಪ್ರಕಟಿಸುತ್ತ ಬಂತು. ಈ ಕಮ್ಮಟಗಳು ಮೈಸೂರು ಅಥವಾ ಬೆಂಗಳೂರು ನಗರಕ್ಕೇ, ಅಥವಾ ಕೆಲವೇ ಉತ್ಸಾಹಿಗಳಿಗೆ, ಸೀಮಿತವಾಗಿರದೆ, ಇವು ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಪ್ರಮುಖ ಸ್ಥಳಗಳಲ್ಲೂ ನಡೆಯಬೇಕು, ಎಲ್ಲ ಆಸಕ್ತರೂ ಇದರಲ್ಲಿ ಪಾಲ್ಗೊಳ್ಳುವಂತಾಗಬೇಕು ಎಂಬ ಉದ್ದೇಶದಿಂದಾಗಿ ಈ ಚಳವಳಿ ರಾಜ್ಯಕ್ಕೆಲ್ಲ ಹಬ್ಬಿತು. ಇದೇನೂ ಅಗಾಧ ಅಲೆಯನ್ನೆಬ್ಬಿಸಲಿಲ್ಲವಾದರೂ, ತನ್ನ ಸೀಮಿತ ಪರಿಧಿಯಲ್ಲಿ ಸಾರ್ಥಕವೆನಿಸಿತೆಂದು ಹೇಳಬಹುದು.

ಆದರೆ ಈ ಎಲ್ಲ ಕೆಲಸವನ್ನೂ ನಿರ್ವಹಿಸುವ ಹೊಣೆ ಹೊತ್ತವರ ತಂಡ ಮುಂದೆ ಅನೇಕ ಅಡೆತಡೆಗಳನ್ನೆದುರಿಸಬೇಕಾಗಿ ಬಂತು. ತಂಡದ ಸದಸ್ಯರು ಬ್ಯಾಂಕ್ ಉದ್ಯೋಗಿಗಳಾದ್ದರಿಂದ ಅವರು ಮೈಸೂರು ಬೆಂಗಳೂರುಗಳಿಂದ ಬೇರೆಡೆಗೆ ವರ್ಗವಾದರು. ಸಂಪರ್ಕ ಕಷ್ಟವಾಯಿತು. ಅನೇಕರು ಪದೋನ್ನತಿ ಪಡೆದು ತುಂಬ ಹೊಣೆಗಾರಿಕೆಯ ಕಾರ್ಯಭಾರಗಳನ್ನು ನಿರ್ವಹಿಸುವುದು ಅನಿವಾರ್ಯವಾಯಿತು. ಅದರ ಪ್ರಥಮ ನಿಷ್ಠೆ ತಮ್ಮ ಬ್ಯಾಂಕಿಗೆ. ಇದೂ ಬ್ಯಾಂಕಿಂಗ್ ಕೆಲಸವಾದರೂ ಮೂಲ ನಿಷ್ಠೆಗೆ ಅನ್ಯಾಯವಾಗದಂತೆ ಈ ಕೆಲಸದ ಹೊಣೆ ಹೊರುವುದು ಕಷ್ಟವಾಯಿತು. ಈ ತಂಡಕ್ಕೆ ಸಹಾಯಕವಾಗಿ ಎರಡು ಮೂರನೆಯ ಸ್ತರಗಳಲ್ಲಿ ಕಿರಿಯ ಉತ್ಸಾಹಿ ಕಾರ್ಯಕರ್ತರನ್ನು ಈ ಕಾರ್ಯದಲ್ಲಿ ತೊಡಗಿಸುವುದು ಸಾಧ್ಯವಾಗದಂತಾಯಿತು. ಕಿರಿಯರಲ್ಲಿ ಇದೇ ಬಗೆಯ ಶ್ರದ್ಧೆ, ಉತ್ಸಾಹಗಳಿರುವವರು ದೊರಕದಂತಾಯಿತು. ಹೀಗಾಗಿ ಚಟುವಟಿಕೆ ತಗ್ಗತೊಡಗಿತು. ಅರ್ಧವಾರ್ಷಿಕವಾಗಿ ನಡೆಯುತ್ತಿದ್ದ ಕಮ್ಮಟಗಳೂ ಇಲ್ಲವಾದುವು. 'ಫಸಲು ಧಾರಾಳವಾಗಿದೆ, ಕೊಯ್ಯುವವರು ಕಡಿಮೆ' ಎಂಬ ಬೈಬಲ್ ವಾಕ್ಯ ನಮಗೂ ಅನುಭವಕ್ಕೆ ಬಂತು.

ಸಹಜವಾಗಿಯೇ 'ಬ್ಯಾಂಕಿಂಗ್ ಪ್ರಪಂಚ'ವನ್ನು ನಡೆಸುವುದು ಕಷ್ಟವಾಯಿತು. ಲೇಖನಗಳ ಸಂಗ್ರಹ, ಪರಿಷ್ಕರಣೆ, ಸಂಪಾದನೆ, ಮುದ್ರಣ, ಹಂಚಿಕೆ - ಎಲ್ಲವೂ ಕಠಿಣ ಎನಿಸಿತು. ಹೀಗಾಗಿ 'ಬ್ಯಾಂಕಿಂಗ್ ಪ್ರಪಂಚ' ನಿಲ್ಲುವ ಸ್ಥಿತಿಗೆ ಬಂತು.

ಆದರೂ ನೈತಿಕ ಹೊಣೆಯನ್ನು ತಪ್ಪಿಸಿಕೊಳ್ಳುವಂತಿಲ್ಲ. ನಿರಂತರ ಶ್ರಮದ ಫಲವಾಗಿ 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಅನೇಕ ಆಜೀವ ಚಂದಾದಾರರ ಸಂಪತ್ತಿ ಪ್ರಾಪ್ತವಾಗಿದೆ. ಅನೇಕ ಜಾಹೀರಾತುದಾರರು ಪ್ರೋತ್ಸಾಹ ನೀಡಿದ್ದಾರೆ. ಅವರೆಲ್ಲರನ್ನೂ ನಾವು ಮರೆಯುವಂತಿಲ್ಲ. ಆದ್ದರಿಂದ ಇದನ್ನೂ ಪುನರುಜ್ಜೀವನಗೊಳಿಸುವ ಸಂಕಲ್ಪ ಮಾಡಿದ್ದೇವೆ. ಸುಮಾರು ಎರಡುವರ್ಷಕಾಲ ಅಜ್ಞಾತವಾಸದಲ್ಲಿದ್ದ ಪತ್ರಿಕೆ ಈಗ ಹೊಸ ಶಕ್ತಿ ಸಂಪಾದನೆ ಮಾಡಿಕೊಳ್ಳಲು ಹವಣಿಸುತ್ತಿದೆ. ನಿರಂತರವಾಗಿ ಸಾಗುವಳಿ ಮಾಡಿದ ಜಮೀನನ್ನು ಸ್ವಲ್ಪ ಕಾಲ ಪಾಳು ಬಿಟ್ಟರೆ ಅದು ತನ್ನ ಸಾರವನ್ನು ಮತ್ತೆ ಪಡೆದುಕೊಳ್ಳುತ್ತದೆ, ಹೆಚ್ಚು ಫಲಪ್ರದವಾಗುತ್ತದೆ. ಅಂತೆಯೇ 'ಬ್ಯಾಂಕಿಂಗ್ ಪ್ರಪಂಚ' ಇನ್ನೂ ಹೆಚ್ಚಿನ ಕಳೆಯಿಂದ, ವೈವಿಧ್ಯದಿಂದ, ಉಪಯುಕ್ತತೆಯಿಂದ ಕೂಡಿ ಹೊರಬರುವಂತೆ ಮಾಡಲು ಯತ್ನಿಸುತ್ತಿದ್ದೇವೆ.

ಈ ನಡುವಿನ ಕಾಲಕ್ಕೆ ಸಂಬಂಧಿಸಿದಂತೆ ನಮ್ಮ ಓದುಗರಿಗೆ ಏನಾದರೂ ಕೊಡುಗೆ ನೀಡಬೇಕೆಂಬುದು ನಮ್ಮ ಹಂಬಲ. ಅಂತೆಯೇ ಈ ಹಿಂದಿನ ವರ್ಷಗಳಲ್ಲಿ 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟವಾದ ಲೇಖನಗಳಲ್ಲಿ ಉತ್ತಮವಾದವನ್ನು, ಪ್ರಾತಿಧಿಕವೆನಿಸಿದವನ್ನೂ ಸಂಕಲಿಸಿ ಎರಡು ಸಂಪುಟಗಳಲ್ಲಿ ಓದುಗರಿಗೆ ಸಮರ್ಪಿಸಬೇಕೆಂದು ಉದ್ದೇಶಿಸಿ ಈ ಮೊದಲನೆಯ ಸಂಪುಟವನ್ನು ಅವರ ಮಡಿಲಿಗೆ ಹಾಕುತ್ತಿದ್ದೇವೆ. ಅರ್ಥವ್ಯವಸ್ಥೆಯಲ್ಲಿ ಚಿನ್ನ, ಭಾರತದ ರಫ್ತು ವ್ಯಾಪಾರ, ಸರ್ಕಾರದ ಹೊಸ ಆರ್ಥಿಕ ನೀತಿ, ಕೃಷಿ ಪತ್ರಿಗೆ ಸಂಬಂಧಿಸಿದಂತೆ ಖುಸ್ರೋ ಸಮಿತಿಯ ಶಿಫಾರಸುಗಳು, ಸಹಕಾರಿ ಬ್ಯಾಂಕಿಂಗ್, ಗ್ರಾಹಕರ ಸೇವೆ, ರಫ್ತು ಉದರಿ ಖಾತರಿ ನಿಗಮ, ಬ್ಯಾಂಕ್ ಸಾಲಕ್ಕೆ ಆಧಾರಗಳು, ವಿದ್ಯುನ್ಮಾನ ಬ್ಯಾಂಕಿಂಗ್ - ಮುಂತಾದ ಲೇಖನಗಳು ಇಲ್ಲಿವೆ. ಇವೆಲ್ಲ ಶಾಶ್ವತ ಮೌಲ್ಯ ಉಳ್ಳಂಥವು. ಪರಾಮರ್ಶನಕ್ಕೆ ಒದಗಿಬರುವಂಥವು. ಮುಂದೆ ಈ ಬಗೆಯ ಇನ್ನೊಂದು ಸಂಪುಟವೂ ಬರಲಿದೆ. ಅನಂತರ 'ಬ್ಯಾಂಕಿಂಗ್ ಪ್ರಪಂಚ' ಎಂದಿನಂತೆ ನಿಯತಕಾಲಿಕವಾಗಿ, ಮೈತುಂಬಿಕೊಂಡು, ಹೆಚ್ಚಿನ ಕಳೆ ಹಾಗೂ ಉಪಯುಕ್ತತೆಯಿಂದ ಕೂಡಿ ಹೊರಬರುವಂತೆ ಎಲ್ಲ ಪ್ರಯತ್ನಗಳನ್ನು ಮಾಡುವೆವೆಂಬ ಭರವಸೆ ನೀಡುತ್ತೇವೆ.

*- ಸಂಪಾದಕ*

# ಮೈಸೂರು ಬ್ಯಾಂಕ್ ಮತ್ತು ಕನ್ನಡ

ಮೈಸೂರು ಬ್ಯಾಂಕು ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಸಂಸ್ಥೆ. ಹಳೆಯ ಮೈಸೂರಿನ ಜೀವಶಿಲ್ಪಿ, ಕೃಷ್ಣರಾಜಸಾಗರದ ನಿರ್ಮಾಪಕ, ಭದ್ರಾವತಿ ಕಬ್ಬಿಣ-ಉಕ್ಕು ಕಾರ್ಖಾನೆಯೇ ಮುಂತಾದ ಅನೇಕಾನೇಕ ಕೈಗಾರಿಕೋದ್ಯಮಗಳ ಪಿತ, ಕೈಗಾರಿಕೆಯನ್ನು ಬೆಳಸಿ, ಇಲ್ಲವೇ ಅಳಿಯುವಿರಿ ಎಂದು ದೇಶವೆನ್ನೆಚ್ಚರಿಸಿದ ಮಹಾ ದ್ರಷ್ಟಾರ, ಗ್ರಾಮೀಣ ಅಭಿವೃದ್ಧಿಗಾಗಿ ಅರ್ಧ ಶತಮಾನಕ್ಕೂ ಹಿಂದೆಯೇ ನೀಲನಕ್ಷೆ ತಯಾರಿಸಿ ಜಾರಿಗೆ ತಂದ ರಚನಾತ್ಮಕ ಕಾರ್ಯಕರ್ತ, ಖಾಸಗಿ ಮತ್ತು ಸರ್ಕಾರಿ ವಲಯಗಳೆರಡಕ್ಕೂ ಅವಕಾಶವಿರುವ ಸಮ್ಮಿಶ್ರ ಅರ್ಥವ್ಯವಸ್ಥೆಯ ನೀತಿಯನ್ನು ಪ್ರಪ್ರಥಮವಾಗಿ ಪ್ರಯೋಗ ಮಾಡಿ ತೋರಿಸಿಕೊಟ್ಟ ಕಾರ್ಯಪಟು, ಆಧುನಿಕ ಆರ್ಥಿಕ ಯೋಜನಾ ಪರಿಕಲ್ಪನೆಯ ಕನಸುಗಾರ, ಧೀಮಂತ ಆಡಳಿತಗಾರ ಹಾಗೂ ರಾಜ ನೀತಿಜ್ಞ, ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರ ದೂರದೃಷ್ಟಿಯ ಫಲವಾಗಿ ಸ್ಥಾಪಿತವಾದ ಮೈಸೂರು ಬ್ಯಾಂಕು ಹಳೆಯ ಮೈಸೂರು ಸಂಸ್ಥಾನದ ಆರ್ಥಿಕಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಹೆಮ್ಮೆಯ ಸಂಸ್ಥೆ. ಮೈಸೂರೆನ್ನಿ, ಕನ್ನಡವೆನ್ನಿ, ಮಲ್ಲಿಗೆಯೆನ್ನಿ, ಒಂದೆ ಎಂಬ ಮೈಸೂರು ಮಲ್ಲಿಗೆಯ ಕವಿ ನರಸಿಂಹಸ್ವಾಮಿಯವರ ಕಲ್ಪನೆಯನ್ನು ಮುಂದುವರೆಸಿ ಈ ಪಟ್ಟಿಯನ್ನು ಬಳಸುವುದಾದರೆ ಮೈಸೂರು ಬ್ಯಾಂಕನ್ನೂ ಇದರಲ್ಲಿ ಸೇರಿಸಬೇಕು. ಮೈಸೂರಿನ ಶ್ರೀಗಂಧದಂತೆ, ರೇಷ್ಮೆಯಂತೆ ಈ ಬ್ಯಾಂಕಿನ ಕಂಪೂ ವಿಸ್ತಾರವಾದ್ದು.

ಹಳೆಯ ಮೈಸೂರು ಸಂಸ್ಥಾನದಲ್ಲಿ ಸರ್ಕಾರದ ವ್ಯವಹಾರವನ್ನು ನಡೆಸುವ ಪ್ರತಿಷ್ಠೆಯ ಬ್ಯಾಂಕಾಗಿ ಬೆಳೆದ ಮೈಸೂರು ಬ್ಯಾಂಕಿನ ಈ ಮಹತ್ವಪೂರ್ಣ ಸ್ಥಾನವೇ ಮುಂದೆ ಇದರ ಸಂಘಟನಾತ್ಮಕ ಪರಿವರ್ತನೆಗೆ ಕಾರಣವಾಯಿತು. ಬ್ರಿಟಿಷ್ ಸಾಮ್ರಾಜ್ಯವಾದದ ಕೈಗೂಸಾಗಿ ಬೆಳೆದಿದ್ದ ಇಂಪೀರಿಯಲ್ ಬ್ಯಾಂಕನ್ನು ಭಾರತೀಯ ಸ್ಟೇಟ್ ಬ್ಯಾಂಕ್ ಆಗಿ ಪರಿವರ್ತಿಸಿದಾಗ ಇತರ ಹಲವು ಮಾಜಿ ದೇಶೀಯ ಸಂಸ್ಥಾನಗಳ ಪ್ರತಿಷ್ಠಿತ ಬ್ಯಾಂಕುಗಳಂತೆ ಮೈಸೂರು ಬ್ಯಾಂಕೂ ಸ್ಟೇಟ್ ಬ್ಯಾಂಕ್ ಕಕ್ಷೆಯೊಳಕ್ಕೆ ಬಂತು. ಮೊದಲು ಭಾರತೀಯ ಸ್ಟೇಟ್ ಬ್ಯಾಂಕಿನ ಸಹಾಯಕ ಬ್ಯಾಂಕಾಯಿತು. ಅನಂತರ ಅದರ ಸಹವರ್ತಿ ಬ್ಯಾಂಕಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಜಾಲವನ್ನು ವಿಸ್ತರಿಸಬೇಕೆಂಬ ಅಖಿಲ ಭಾರತ ಗ್ರಾಮೀಣ ಉದರಿ ಸರ್ವೇಕ್ಷಣಾ ಸಮಿತಿಯ ಸಲಹೆಗಳಿಗೆ ಅನುಗುಣವಾಗಿ ರೂಪಿತವಾದ ಈ ವ್ಯವಸ್ಥೆಯಲ್ಲಿ ಸ್ಟೇಟ್ ಬ್ಯಾಂಕಿನ ಇತರ ಬ್ಯಾಂಕುಗಳಂತೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಹೊಣೆಯೂ ಹೆಚ್ಚಿತು, ಸೇವಾವಕಾಶಗಳೂ ವಿಸ್ತರಿಸಿದವು. ಆದರೆ ಇದರೊಂದಿಗೇ ಇದರ ಸ್ವಾತಂತ್ರ್ಯವೂ ಕುಂಠಿತವಾಯಿತು. ಪ್ರಧಾನ ಕಲಾವಿದನಾಗಿದ್ದವನನ್ನು ಪಕ್ಕವಾದ್ಯಗಾರನನ್ನಾಗಿ ಮಾಡಿದಂತಾಯಿತು. ಕೆಲವು ವಿಚಾರಗಳಲ್ಲಿ ಅದರ ವೈಶಿಷ್ಟ್ಯ ಕರಗಿಹೋಯಿತು. ಹತ್ತರ ಕೂಡ ಹನ್ನೊಂದು ಎಂಬ ಹಾಗಾಯಿತು. ಅರಳುವ ಗುಲಾಬಿಗೆ ಕಬ್ಬಿಣದ ಚೌಕಟ್ಟು ಹಾಕಿದಂತಾಯಿತು. ಮುಂದೆ ಕೇಂದ್ರ ಸರ್ಕಾರ ಹಲವು ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿ ಅವಕ್ಕೂ ಗ್ರಾಮೀಣ ಆರ್ಥಿಕ ಬದುಕಿಗೂ ಮಹಾ ಪರಿವರ್ತನೆಯ ಹೊಣೆಯನ್ನು ವಹಿಸಿಕೊಟ್ಟಾಗ ಸ್ಟೇಟ್ ಬ್ಯಾಂಕ್ ಗುಂಪಿನ ಅರ್ಥವೇ ಕುಂದಿತೆನ್ನಬೇಕು. ಈ ಬ್ಯಾಂಕುಗಳನ್ನು ಹಿಂದಿನಂತೆ ಸ್ವತಂತ್ರ ಬ್ಯಾಂಕಿಂಗ್ ಸಂಸ್ಥೆಗಳಾಗಿ ಪರಿವರ್ತಿಸುವುದು ಉಚಿತ. ಆದರೆ ಹೊಸ ಹಾದಿ ಹಿಡಿದೂ ಹಳೆಯ ಹಾದಿ ಬಿಟ್ಟುಕೊಡದ ವಿಚಿತ್ರ ನೀತಿ ನಮ್ಮ ಸರ್ಕಾರದ್ದು. ಹೀಗಾಗಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನಂಥ ಬ್ಯಾಂಕುಗಳು ಇಲ್ಲಿಯೂ ಸಲ್ಲದ, ಅಲ್ಲಿಯೂ ಸಲ್ಲದ ವಿಲಕ್ಷಣ ಸಂಸ್ಥೆಗಳಾಗಿವೆ. ಸ್ಟೇಟ್ ಬ್ಯಾಂಕಿನ ಚೌಕಟ್ಟು ಇಲ್ಲದಿದ್ದರೆ ಬಹುಶಃ ಮೈಸೂರು ಬ್ಯಾಂಕು ಇನ್ನೂ ವೈಶಿಷ್ಟ್ಯಪೂರ್ಣವಾಗಿ ವಿಕಾಸ ಹೊಂದುತ್ತಿತ್ತು.

ಆದರೂ ಮೈಸೂರು ಬ್ಯಾಂಕು ಇಂದಿಗೂ ಮುಖ್ಯವಾಗಿ ಕರ್ನಾಟಕದ ಬ್ಯಾಂಕಾಗಿಯೇ ಉಳಿದಿದೆಯೆನ್ನಬೇಕು. ಕರ್ನಾಟಕದಲ್ಲೇ ಮುಖ್ಯವಾಗಿ ಹಳೆಯ ಮೈಸೂರು ಭಾಗದಲ್ಲಿ ಇದರ ಶಾಖೆಗಳ ಜಾಲ ಹೆಚ್ಚಾಗಿ ವಿಸ್ತರಿಸಿದೆ. ಗಂಗೆ-ಯಮುನೆಗಳ ಸಂಗಮವಾದ ಮೇಲೂ ಕಣ್ಣು ಹಾಯುವಷ್ಟು ದೂರ ಅವೆರಡೂ ನದಿಗಳ ಧಾರೆಗಳು ಬೇರೆ ಬೇರೆಯಾಗಿಯೇ ತೋರುವಂತೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅನೇಕ ಉಸಿರು ಸಿಕ್ಕಿಸುವ ನಿರ್ಬಂಧಗಳ ನಡುವೆಯೂ, ಹೊರಗಿನ ಗಾಳಿಯನ್ನು ಎದುರಿಸಿಯೂ ಇಂದಿಗೂ ತನ್ನ ಕೆಲವು ಪರಂಪರಾಗತ ಸಲ್ಲಕ್ಷಣಗಳನ್ನು ಉಳಿಸಿಕೊಂಡು ಬಂದಿದೆ. ಇದು ಸ್ವಲ್ಪ ಮಟ್ಟಿಗೆ ಆಸೆ ಕೊನರಿಸುವ ಸಂಗತಿ.

ಇಂದು ಭಾರತಾದ್ಯಂತ ಶಾಖಾ ಜಾಲಗಳನ್ನು ಹಬ್ಬಿಸಿಕೊಂಡಿರುವ ಅನೇಕ ಬೃಹತ್ ಬ್ಯಾಂಕಿಂಗ್ ಸಂಸ್ಥೆಗಳು ಕರ್ನಾಟಕದಲ್ಲಿ ಹುಟ್ಟಿ ಬೆಳೆದವೇ ಆದರೂ, ಕನ್ನಡದ ಹೆಸರು ಹೇಳುವುದೂ ಮಹಾ ಪಾಪ, ಅದು ಕಿವಿಯ ಮೇಲೆ ಬಿದ್ದರೆ ಮೈಲಿಗೆ ಎಂಬುದು ಆ ಬ್ಯಾಂಕುಗಳ ಮನೋಭಾವ. ನಮ್ಮ ಸಂವಿಧಾನದಲ್ಲಿ ಪ್ರತಿ ರಾಜ್ಯಕ್ಕೂ ಸಂಬಂಧಿಸಿದಂತೆ ಮೂರು ಭಾಷೆಗಳನ್ನು ಮಾನ್ಯ ಮಾಡಲಾಗಿದೆಯೆಂಬುದನ್ನು ಅವು ಮರೆತಿವೆ. ಪ್ರತಿ ರಾಜ್ಯದಲ್ಲೂ ಆ ರಾಜ್ಯದ ಭಾಷೆ ಮೊದಲು, ಆಮೇಲೆ

ಹಿಂದಿ, ಅನಂತರ ಇಂಗ್ಲೀಷ್ ಎಂಬುದು ಅಂಗೀಕೃತ ಸೂತ್ರವಾಗಿದ್ದರೂ, ಆ ಬ್ಯಾಂಕುಗಳು ಕನ್ನಡಕ್ಕೆ ಏನೇನೂ ಸ್ಥಾನವನ್ನೇ ನೀಡದಿರುವುದು ದುರ್ದೈವದ ಸಂಗತಿ. ಅವು ಹಿಂದಿಯೊಂದನ್ನೇ ಮುಂದೆ ಚಾಚಲು ಹರಿಹಾಯುತ್ತಿವೆ. ಎತ್ತು ಹಾರುವ ಮುಂಚೆ ಗೋಣಿ ಹಾರಿತು ಎಂಬ ಹಾಗೆ ವರ್ತಿಸುತ್ತಿವೆ. ಹಿಂದಿಯನ್ನು ತಲೆಯ ಮೇಲೆ ಹೊತ್ತು ನಡೆದರೆ ಆಳರಸರನ್ನು ಮೆಚ್ಚಿಸಬಹುದೆಂಬ ಸ್ವಾರ್ಥ ಇವುಗಳು. ಕನ್ನಡದ ಸೊಲ್ಲೆತ್ತುವುದೇ ಅಪರಾಧ ಎಂಬ ಭೀತಿ ಇವುಗಳ ವ್ಯವಸ್ಥಾಪಕ ವರ್ಗಕ್ಕೆ, ಗುಲಾಮ ಮನೋಭಾವದ ವ್ಯವಸ್ಥಾಪಕ ಸಮೂಹದಿಂದ ನಿಜಕ್ಕೂ ಸಾಮಾಜಿಕ ವಿಕಾಸ ಸಾಧ್ಯವಾಗದು. ಬ್ಯಾಂಕಿಂಗ್ ಒಂದು ವಿಶಿಷ್ಟ ಕಲೆ. ಅದು ಬರೀ ಶುಷ್ಕ ಕಂದಾಚಾರವಲ್ಲ, ಹೇಳಿ ಬರೆಯಿಸಿದ ಮಕ್ಕಿಕಾಮಕ್ಕಿಯಲ್ಲ. ಜನಸಾಮಾನ್ಯರು ಆಡುವ ಭಾಷೆಯಲ್ಲಿ ವ್ಯವಹಾರ ಮಾಡುವುದಕ್ಕಿಂತ ಹೆಚ್ಚು ನ್ಯಾಯಬದ್ಧವಾದ್ದೂ, ಸಹಜವಾದ್ದೂ, ಜನಹಿತದೊಂದಿಗೆ ಸ್ವಹಿತವನ್ನೂ ಸಂಸ್ಥಾಹಿತವನ್ನೂ ಸಾಧಿಸುವಂಥದೂ ಬೇರೊಂದಿಲ್ಲ ಎಂಬ ಸತ್ಯದ ಮನವರಿಕೆ ಆಗದಿರುವುದು ದೇಶಕ್ಕೇ ಒಳ್ಳೆಯದಲ್ಲ.

ಪ್ರತಿಕೂಲಕರ ವಾತಾವರಣದಲ್ಲೂ ಪ್ರಾದೇಶಿಕ ಭಾಷೆಯನ್ನು ಕನ್ನಡವನ್ನು ಅಗತ್ಯವಿದ್ದಲ್ಲೆಲ್ಲ ಬಳಸಲು ಮೈಸೂರು ಬ್ಯಾಂಕು ಈಚಿನ ವರ್ಷಗಳಲ್ಲಿ ಯತ್ನಿಸುತ್ತಿರುವುದು ಸ್ವಾಗತಾರ್ಹ. ಸಂವಿಧಾನದಲ್ಲಿ ಲಭ್ಯವಿರುವ ಅವಕಾಶಗಳನ್ನು ಸರಿಯಾಗಿ ಬಳಸಿಕೊಂಡರೂ ಸಾಕು. ಮಾಡಬಾರದ್ದನ್ನೇನೋ ಮಾಡುತ್ತಿದ್ದೇವೆಂಬ ಅಂಜಿಕೆ ಯಾರಿಗೂ ಇರಬಾರದು. ಕನ್ನಡವನ್ನು ಬಳಸುವಲ್ಲಿ ಮೈಸೂರು ಬ್ಯಾಂಕು ನಿಧಾನವಾಗಿಯಾದರೂ ದೃಢವಾದ ಹೆಜ್ಜೆ ಹಾಕುತ್ತಿದೆ. ಬ್ಯಾಂಕಿನ ಪ್ರಧಾನ ಕಛೇರಿಯಲ್ಲಿ ಕನ್ನಡ ವಿಭಾಗವೊಂದು ಆರಂಭವಾಗಿದೆ. ಉತ್ಸಾಹಿ ಹಾಗೂ ನಿಷ್ಠಾವಂತ ಕಾರ್ಯಕರ್ತರು ಇದನ್ನು ನಿರ್ವಹಿಸುತ್ತ ಬಂದಿದ್ದಾರೆ. ಜನಸಾಮಾನ್ಯರಿಗೆ ಉಪಯುಕ್ತವಾಗುವ ಬ್ಯಾಂಕಿನ ಅನೇಕ ನಮೂನೆಗಳನ್ನು ಇವರು ಕನ್ನಡಕ್ಕೆ ತಂದಿದ್ದಾರೆ.

ಇನ್ನೊಂದು ಪ್ರಮುಖ ಕ್ರಮವೆಂದರೆ, ಸಣ್ಣ ವ್ಯವಹಾರಗಳಿಗೆ ಸಂಬಂಧಿಸಿದ ನಾನಾ ನಿಯಮ ನಿಬಂಧನೆಗಳನ್ನೊಳಗೊಂಡ ಕೈಪಿಡಿಯ ಕನ್ನಡ ಅನುವಾದ, ಇದಕ್ಕಾಗಿ ೧೯೮೭ರ ಜುಲೈ ತಿಂಗಳಲ್ಲಿ ಒಂದು ಭಾಷಾಂತರ ಕಮ್ಮಟವನ್ನು ಸಂಘಟಿಸಲಾಗಿತ್ತು. ಅದರಲ್ಲಿ ಭಾಗವಹಿಸಿದ ಸಮರ್ಥ ಉತ್ಸಾಹಿಗಳು ಕಿರೀಟ ಚತುರ್ಥ ಆಕಾರದ ಸುಮಾರು ೨೫೦ ಪುಟಗಳ ಆ ಕೈಪಿಡಿಯನ್ನು ಕನ್ನಡಿಸಿದರು. ಆ ಅನುವಾದವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಇದೀಗ ಪ್ರಕಟಿಸಲಾಗಿದೆ. ಇದರಿಂದ ಬ್ಯಾಂಕಿಂಗ್ ವ್ಯವಹಾರಕ್ಕೆ ಸಂಬಂಧಿಸಿದ ಪರಿಭಾಷೆ ಕನ್ನಡಕ್ಕೆ ಲಭ್ಯವಾದಂತಾಗಿದೆ. ಇದನ್ನು ಬ್ಯಾಂಕಿನ ಎಲ್ಲ ಉದ್ಯೋಗಿಗಳೂ ಬಳಸಬೇಕು. ಬಳಕೆಯಿಂದ ಇದು ಹೆಚ್ಚು ಪರಿಚಿತವಾಗುತ್ತವೆ, ಸ್ವೀಕಾರಯೋಗ್ಯವಾಗುತ್ತದೆ. ಜನರ ನಡುವಿನ ಸಂಸ್ಥೆಯಾದ ಬ್ಯಾಂಕ್ ಜನರ ಭಾಷೆಯಲ್ಲೇ ವ್ಯವಹರಿಸುವುದರಿಂದ ಅದರ ಸೇವೆ ಸಾರ್ಥಕವೆನಿಸುತ್ತದೆ.

ಮೈಸೂರು ಬ್ಯಾಂಕಿನ ಈ ಮಹತ್ವದ ಕಾರ್ಯ ಮೆಚ್ಚುಗೆಗೆ ಅರ್ಹವಾಗಿದೆ. ಇದನ್ನು ಆಗಮಾಡಿಸಿದ ಎಲ್ಲರನ್ನೂ ನಾವು ಅಭಿನಂದಿಸುತ್ತೇವೆ. ಈ ಕೆಲಸ ಮುಂದುವರಿಯಲಿ. ಬ್ಯಾಂಕಿಗೆ ಸಂಬಂಧಿಸಿದ ಎಲ್ಲ ಪ್ರಮುಖ ನಮೂನೆಗಳೂ ನಿಯಮ ನಿಬಂಧನೆಗಳೂ ಇತರ ಸಾಮಗ್ರಿಯೂ ಕನ್ನಡಕ್ಕೆ ಬರಲಿ ಎಂದು ಹಾರೈಸುತ್ತೇವೆ.

## ಸಲಹೆಗಳು–ಮೆಚ್ಚುಗೆಗಳು

ಬ್ಯಾಂಕಿಂಗ್ ಪ್ರಪಂಚ ನಿಮಗೆ ಒಪ್ಪಿಗೆಯಾಗಿದೆಯೆ? ಇಲ್ಲವೆ? ಏಕೆ? ಇದರ ವೈಶಿಷ್ಟ್ಯಗಳೂ ಅರೆಕೊರೆಗಳೂ ಯಾವುವು? ಇದನ್ನು ಉತ್ತಮಪಡಿಸಲು ನಿಮ್ಮ ಸಲಹೆಗಳೇನು? ಈ ಪ್ರಶ್ನೆಗಳಿಗೆ ಓದುಗರಿಂದ ಉತ್ತರ ಬಯಸುತ್ತಿದ್ದೇವೆ. ಕಳೆದ ಸಂಚಿಕೆಯಲ್ಲಿ ಪ್ರಕಟಿಸಲಾಗಿದ್ದ ಈ ಪ್ರಶ್ನೆಗಳಿಗೆ ಉತ್ತರವಾಗಿ ಬಂದಿದೆ ಈ ಪ್ರತಿಕ್ರಿಯೆ. ಈ ಕುರಿತು ೨೫೦ ಪದಗಳಿಗೆ ಮೀರದಂತೆ ಓದುಗರಿಂದ ಬರುವ ಬರಹಗಳಿಗೆ ಸದಾ ಸ್ವಾಗತ. *– ಎಂ. ಶಶಿಧರ್*

ಬ್ಯಾಂಕಿಂಗ್ ಪ್ರಪಂಚವನ್ನು ಬಹುಮಟ್ಟಿಗೆ ತಪ್ಪದೇ ಓದುತ್ತಿರುವೆ. ಆಜೀವ ಚಂದಾದಾರರಲ್ಲಿ ನಾನೂ ಒಬ್ಬನಾಗಿರುವುದರಿಂದ ಮತ್ತು ಪತ್ರಿಕೆಯ ರವಾನೆ ವ್ಯವಸ್ಥೆ ಉತ್ತಮವಾಗಿರುವುದರಿಂದ ಪತ್ರಿಕೆಯು ನಿಯಮಿತವಾಗಿ ತಲುಪುತ್ತವೆ. ಅದರಲ್ಲಿ ಇರುವ ಹಲವು ವಿಚಾರಪ್ರದ ಲೇಖನಗಳು ಕುತೂಹಲ ಕೆರಳಿಸುವುದರಿಂದ ಬ್ಯಾಂಕಿಂಗ್ ಪ್ರಪಂಚವನ್ನು ಪೂರ್ತಿಯಾಗಿ ಓದುವ ಪರಿಪಾಠ ಬೆಳೆದು ಬಂದಿದೆ. ಮಧ್ಯದಲ್ಲಿ ಕೆಲವು ಸಂಚಿಕೆಗಳನ್ನು ಗಮನವಿಟ್ಟು ಓದಲಿಲ್ಲವೆಂದು ತಪ್ಪೊಪ್ಪಿಕೊಳ್ಳಬೇಕು. ಆಗ ನಾನು ಅಂಚೆ ಮೂಲಕ ಕನ್ನಡ ಎಂ.ಎ. ಓದುತ್ತಿದ್ದು ಕನ್ನಡದ ಪ್ರಾಚೀನ, ಮಧ್ಯಯುಗದ, ಆಧುನಿಕ ಸಾಹಿತ್ಯದ ದಿಗ್ಗಜಗಳ ಕೃತಿ ರತ್ನಗಳೆಂಬ ಮಹಾವಟಗಳಡಿ ನಿಂತು ಕಣ್ಣು ಕಣ್ಣು ಬಿಡುತ್ತಿದ್ದುದರಿಂದ ದಿನಪತ್ರಿಕೆಯಾದಿಯಾಗಿ ಎಲ್ಲಾ ಪತ್ರಿಕೆಗಳ ಪಠಣವನ್ನು ನಿಲ್ಲಿಸಿದ್ದೆ.

ಆದರೂ ಬ್ಯಾಂಕಿಂಗ್ ಪ್ರಪಂಚದ ವೈಶಿಷ್ಟ್ಯವೆಂದರೆ, ಅದನ್ನು ಒಮ್ಮೆಯಾದರೂ ಗಮನಿಸಲೇ ಬೇಕಾದ ವ್ಯಕ್ತಿತ್ವವನ್ನು ಪಡೆದುಕೊಂಡಿದೆ. ಇತ್ತೀಚಿನ ರಿಸರ್ವ್ ಬ್ಯಾಂಕ್ ನೀತಿ, ಹೊಸ ಬ್ಯಾಂಕಿಂಗ್ ಅಲೆಗಳು, ಅಂತರರಾಷ್ಟ್ರೀಯ ಬ್ಯಾಂಕಿಂಗಿನ ಕೌತುಕಗಳು ಮೊದಲಾದ ವಿಚಾರಗಳನ್ನು ಒಮ್ಮೆಯಾದರೂ ಓದಲೇಬೇಕಾಗುತ್ತಿತ್ತು. ಅನುವಾದಿತ ಲೇಖನದ ತಳದಲ್ಲಿ ಕಮ್ಮಟಿಗರ ಪಟ್ಟಿ ಇದ್ದುದರಿಂದ, ನಮ್ಮ ಗೆಳೆಯರ್ಯಾರಾದರೂ ಈಚಿನ ಕಮ್ಮಟದಲ್ಲಿ ಭಾಗವಹಿಸಿರುವರೆ ಎಂಬುದನ್ನು ಹುಡುಕಲು ಕುತೂಹಲವಿರುತ್ತಿತ್ತು. ಕನ್ನಡದಲ್ಲಿ ಬ್ಯಾಂಕಿಂಗ್ ಚಿಂತನೆ ನಡೆಯುತ್ತಿದೆ ಎಂಬ ವಿಚಾರವೆ ವಿಶೇಷವಾದುದು. ಅದರ ಫಲಗಳು ಬ್ಯಾಂಕಿಂಗ್ ಪ್ರಪಂಚದಲ್ಲಿ ಬರುವುದು ವೈಶಿಷ್ಟ್ಯವಲ್ಲವೆ? ಪಕ್ಷಿಶಾಸ್ತ್ರ, ಭೂಗರ್ಭಶಾಸ್ತ್ರ, ಹವಾಮಾನ ವಿಜ್ಞಾನ ಅಥವಾ

ಬಾಹ್ಯಾಕಾಶ ವಿಜ್ಞಾನ ಮೊದಲಾದ ಹಲವಾರು ಕ್ಷೇತ್ರಗಳಲ್ಲಿ ಕನ್ನಡದ ಚಿಂತನೆ ನಡೆಯುತ್ತಿರುವುದಕ್ಕೆ ಪುರಾವೆಗಳಿಲ್ಲ. ಅಲ್ಲೆಲ್ಲ ಅನುವಾದ ಅಥವಾ ಆಧಾರಿತ ಲೇಖನಗಳ ತಯಾರಿ ಮಾತ್ರ ನಡೆದಿದೆ. ಕನ್ನಡದಲ್ಲಿನ ಬ್ಯಾಂಕಿಂಗ್ ಚಿಂತನೆ ಈ ಘಟ್ಟವನ್ನು ಮೀರಿ, ಹೊಸ ಸಿದ್ಧಾಂತ, ವಿಚಾರಗಳನ್ನು ಮಂಡಿಸುವತ್ತ ದಾಪುಗಾಲು ಹಾಕಿದ್ದು ಸ್ಪಷ್ಟ ಮತ್ತು ಬ್ಯಾಂಕಿಂಗ್ ಪ್ರಪಂಚ ಇದಕ್ಕೆ ಪ್ರಮುಖ ಚೇತನ ಎಂಬುದು ಸ್ಪಷ್ಟ.

ಪತ್ರಿಕೆಯ ಅರೆಕೊರೆಗಳು ಎದ್ದು ಕಾಣಿಸುವಂತಹವಲ್ಲ. ಇದರಲ್ಲಿನ ಜಾಹೀರಾತುಗಳು ಕನ್ನಡದಲ್ಲಿರಬೇಕು ಎಂಬುದು ನನ್ನದೊಂದು ಸಲಹೆ. ಇದರಲ್ಲಿನ ಲೇಖನಗಳು ಶಾಸ್ತ್ರೀಯ ವಿಚಾರಗಳಿಗೆ ಮೀಸಲಾಗಿರುವುದು ಸ್ಪಷ್ಟ. ಆದರೆ ಬ್ಯಾಂಕ್ ಉದ್ಯೋಗಿಯೋರ್ವನ ಪ್ರಪಂಚದಲ್ಲಿ ಹಾಸ್ಯ-ಉದ್ರೇಕ-ಕೋಪ ಮೊದಲಾದ ಅನುಭವಗಳಾಗುವುದು ಸಹಜ. ಅಂತಹ ಅನುಭವಗಳಿಗೆ ಒಂದು ಪುಟವನ್ನು ಮೀಸಲಿಡಬಹುದು. ಉದಾಹರಣೆಗೆ ಕಸ್ತೂರಿ ಪತ್ರಿಕೆಯಲ್ಲಿ ಪ್ರಕಟವಾಗುವ ಇದುವೆ ಜೀವ, ಇದು ಜೀವನ ಎಂಬ ಸ್ಥಿರ ಶೀರ್ಷಿಕೆಯಲ್ಲಿ ಪ್ರಕಟವಾಗುವ ರೀತಿಯ ಕಿರುಬರಹಗಳಿಗೆ ಒಂದು ಅಥವಾ ಎರಡು ಪುಟಗಳನ್ನು ಮೀಸಲಿಡಬಹುದು ಎಂಬುದು ಇನ್ನೊಂದು ಸಲಹೆ.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟಿಸಲು ಲೇಖನಗಳ ಅಭಾವವಿರುವುದು ನಿಜವೆ ಎಂಬ ಅನುಮಾನ ಆಗಾಗ ಬರುತ್ತದೆ. ಸೆಪ್ಟಂಬರ್ ೧೯೯೦ರ ಸಂಚಿಕೆಯಲ್ಲಿ ಬಂದ ಲೇಖನಗಳನ್ನು ಬರೆದವರೆಲ್ಲರೂ ಸಮನ್ವಯ ಸಮಿತಿಯ ಪದಾಧಿಕಾರಿಗಳು ಅಥವಾ ಅವರಿಗೆ ನಿಕಟರು. ಕಮ್ಮಟಗಳಿಂದಾಗಿ ಹೊಸ ಲೇಖಕರ ಪಡೆ ತಯಾರಾಗುತ್ತದೆ ಎಂಬ ಆಶಯ ಎಷ್ಟರಮಟ್ಟಿಗೆ ಯಶಸ್ವಿ ಎಂಬುದು ಚರ್ಚಾರ್ಹ. ಹೊಸಬರು ಹೆಚ್ಚಾಗಿ ಬರೆಯಬೇಕು ನಿಜ. ಆದರೆ ಅದು ಹಳಬರ ತಪ್ಪಂತೂ ಅಲ್ಲವೇ ಅಲ್ಲ. ಈ ನಿಟ್ಟಿನಲ್ಲಿ ಒಂದು ಸೂಚನೆ ಪತ್ರಿಕೆಯಲ್ಲಿ ಲೇಖನ ಪ್ರಕಟವಾದಾಗ ಲೇಖಕರಿಗೆ ಒಂದು ಗೌರವ ಪ್ರತಿಯನ್ನು ಕಳಿಸಬಹುದು. ಇದು ಕೇವಲ ಬಾಹ್ಯಾಡಂಬರ ಎಂದೆನಿಸಬಹುದಾದರೂ ಈ ಸಲಹೆಯನ್ನು ದಯವಿಟ್ಟು ಪರಿಶೀಲಿಸಿ.

ಸೆಪ್ಟಂಬರ್ ೧೯೯೦ರ ಸಂಚಿಕೆಯ ಉತ್ತಮ ಲೇಖನವೆಂದರೆ ಬಿ. ಎಸ್. ಚಂದ್ರಶೇಖರ ಬರೆದ ದಾವೆಯ ಪ್ರಕರಣಗಳ ನಿರ್ವಹಣೆ. ಓದಿದ್ದೆಲ್ಲವೂ ಸ್ಪಷ್ಟವಾಗಿ ಒಮ್ಮೆಗೇ ತಲೆಗೆ ಹಿಡಿಯಿತು. ಮನನವಾಯಿತು.

**ಸಂಪಾದಕರ ಪ್ರತಿಕ್ರಿಯೆ**

ಹೊಸ ಲೇಖಕರ ಪಡೆಯ ನಿರ್ಮಾಣ ಮಾಡುವುದು ಬ್ಯಾಂಕಿಂಗ್ ಪ್ರಪಂಚದ ಮುಖ್ಯ ಗುರಿಗಳಲ್ಲೊಂದು. ಅನೇಕ ಲೇಖಕರು ಪ್ರಕಾಶಕ್ಕೆ ಬಂದಿದ್ದಾರೆ. ಆದರೆ ನಿಯತಕಾಲಿಕವಾಗಿ ಲೇಖನಗಳನ್ನು ಸಿದ್ಧಪಡಿಸಿ ಕಳುಹಿಸುವವರು ಕಡಿಮೆ. ಎಲ್ಲ ಕ್ಷೇತ್ರಗಳಲ್ಲೂ ಇಂದು ಇದೇ ಸ್ಥಿತಿ ಇದೆ. ಸಮರ್ಥರಾದವರು ತಮ್ಮ ಆಲಸ್ಯವನ್ನು ಬಿಟ್ಟು ಲೇಖನ ಬರೆಯುವುದು ತಮ್ಮ ಕರ್ತವ್ಯ ಎಂದು ಬಗೆದು ಕಾರ್ಯೋನ್ಮುಖರಾಗಬೇಕು. ಉದಾಹರಣೆಗೆ ನೀವೇ ಬರೆಯುತ್ತಿಲ್ಲವಲ್ಲ!

ಲೇಖಕರಿಗೆ ಗೌರವ ಸಂಭಾವನೆ ಕಳಿಸಬೇಕೆಂಬುದು ನಮ್ಮ ಹಂಬಲ. ಪತ್ರಿಕೆ ತನ್ನ ಕಾಲ ಮೇಲೆ ತಾನೇ ನಿಲ್ಲುವ ಸ್ಥಿತಿ ಇನ್ನೂ ಬಂದಿಲ್ಲ. ಆದರೆ ಚಂದಾದಾರರಲ್ಲದ ಲೇಖಕರಿಗೆ ಗೌರವ ಪ್ರತಿಯನ್ನಂತೂ ಖಂಡಿತ ಕಳುಹಿಸುತ್ತಿದ್ದೇವೆ. ಚಂದಾದಾರ ಲೇಖಕರಿಗೆ ಇನ್ನೊಂದೊಂದು ಪ್ರತಿ ಕಳಿಸುವ ವ್ಯವಸ್ಥೆ ಮಾಡಬಹುದು.

ಇದುವೆ ಜೀವ - ಇದು ಜೀವನದಂಥ ಅಂಕಣ ಆರಂಭಿಸುವುದು, ಪತ್ರಿಕೆಗೆ ಒಂದು ಆತ್ಮೀಯ ಮುಖ ದೊರಕಿಸಿಕೊಡುವುದು ನಮ್ಮ ಇಚ್ಛೆ. ಆದರೆ ಇಂಥ ಅನುಭವಗಳನ್ನು ಬರೆದು ಕಳುಹಿಸಲು ಯಾರೂ ಮುಂದೆ ಬಂದಿಲ್ಲ. ಬರೆದು ಕಳಿಸಿದರೆ ಸಂತೋಷದಿಂದ ಪ್ರಕಟಿಸುತ್ತೇವೆ.

*ಸಂಪಾದಕೀಯ*

*ಬ್ಯಾಂಕಿಂಗ್ ಪ್ರಪಂಚ - ಡಿಸೆಂಬರ್ ೧೯೯೦*

# ಅರ್ಥ ವ್ಯವಸ್ಥೆಯಲ್ಲಿ ಚಿನ್ನ

ಸಿ. ಗೋವಿಂದಾಚಾರ್

**ಪೀತಲೋಹದಲ್ಲಿ ಮಾನವನ ಮೋಹ ಅತ್ಯಂತ ಪುರಾತನವಾದ್ದು, ಬರ್ಬರ ಯುಗದಿಂದಲೂ ನಡೆದು ಬಂದದ್ದು. ಚಿನ್ನವನ್ನು ಹಣವಾಗಿ ಅವನು ಸ್ವೀಕರಿಸಿದ್ದಕ್ಕೆ ಅದರ ಆಕರ್ಷಣೆಯೂ ಸ್ಥಿರತೆಯೂ ಸಾರ್ವತ್ರಿಕ ಸಂಜ್ಞೇಯತೆಯೂ ವಿಭಜನ ಸಾಧ್ಯತೆಯೂ ವಿರಳತೆಯೂ ಮುಖ್ಯ ಕಾರಣಗಳು. ಆದರೆ ಮಾನವನ ಅಭ್ಯುದಯ ಈ ಲೋಹಕ್ಕೆ ಗಂಟು ಬೀಳುವಂತಾದರೆ ಅದರಿಂದ ಪ್ರಗತಿ ಕುಂಟುತ್ತದೆಂಬುದನ್ನೂ ಆತ ಅರಿತುಕೊಂಡಿದ್ದಾನೆ. ಆದರೂ ಚಿನ್ನದೊಂದಿಗೆ ಮಾನವನ ನಂಟು ಗಂಟು ಸುಲಭವಾಗಿ ಬಿಡುವಂಥದಲ್ಲ. ಅದೊಂದು ಗೋರ್ಡಿಯನ್ ಗಂಟು. ಲೇಖಕರು ಇಲ್ಲಿ ಚಿನ್ನದ ವಿಶ್ವರೂಪ ದರ್ಶನ ಮಾಡಿಸಿದ್ದಾರೆ.**

ಅತಿ ಹೆಚ್ಚು ಸಾರ್ವಜನಿಕ ಭರವಸೆಯುಳ್ಳ ಚಿನ್ನ ಬ್ಯಾಂಕಿಂಗ್ ಮತ್ತು ಹಣ ವ್ಯವಸ್ಥೆಯ ಚೌಕಟ್ಟಿನಲ್ಲಿ ಸುವರ್ಣ ಪ್ರಮಿತಿಯಿಂದ ಎಸ್‌ಡಿಆರ್ (ವಿಶೇಷ ಡ್ರಾಯಿಂಗ್ ಹಕ್ಕು) ಯೋಜನೆಯವರೆಗೆ ನೋವು ನಲಿವುಗಳೆರಡನ್ನೂ ಅನುಭವಿಸಿ ಈಗ ಕೇವಲ ಔಪಚಾರಿಕ ಪಾತ್ರ ವಹಿಸಿದೆ. ಚಿನ್ನದ ಬೇಡಿಕೆ ಪೂರೈಕೆ ಸಮಸ್ಯೆ ಸ್ವರ್ಣಾಧಾರಿತವಾದ ನೋಟು ಪದ್ಧತಿಯನ್ನು ಸಂದಿಗ್ಧ ಪರಿಸ್ಥಿತಿಯಲ್ಲಿರಿಸಿತು. ಕನಿಷ್ಠ ಮೊತ್ತದಷ್ಟು ಚಿನ್ನದ ಮೀಸಲಿಟ್ಟು ಕೇಂದ್ರ ಬ್ಯಾಂಕು ಎಷ್ಟು ಬೇಕಾದರೂ ನೋಟುಗಳನ್ನು ಮುದ್ರಿಸುವ ಹಕ್ಕನ್ನು ಪಡೆಯಿತು. ಇದರಿಂದ ಚಿನ್ನ–ನೋಟುಗಳ ಅಸಮತೆ ಹೆಚ್ಚಾಯಿತು. ಸಮಸ್ಯೆಯೂ ಹೆಚ್ಚಾಯಿತು. ಈ ಚಿನ್ನದ ಮೌಲ್ಯ ಏರಬೇಕಾದರೆ ಸರ್ಕಾರದಿಂದ ಅದರ ಪುನರ್ಮೌಲ್ಯೀಕರಣವಾಗಬೇಕು. ಭಾರತದಲ್ಲಿ ೧೯೪೮ ರಿಂದ ಇಲ್ಲಿಯವರೆಗೆ ಕೇವಲ ಮೂರು ಬಾರಿ ಅಧಿಕೃತವಾಗಿ ಚಿನ್ನದ ಪುನರ್ಮೌಲ್ಯೀಕರಣವಾಗಿದೆ. ಹಳೆಯ ದರದಲ್ಲಿ ಇದರ ಮೌಲ್ಯ ೨೭೪ ಕೋಟಿ ರೂಪಾಯಿಗಳು. ಇಂದಿನ ದರದಲ್ಲಿ ೭೦೦೦ ಕೋಟಿ ರೂಪಾಯಿಗಳು! ಚಿನ್ನದ ಪುನರ್ಮೌಲ್ಯೀಕರಣ ಮಾಡಲು ಇತ್ತೀಚೆಗೆ ಸರ್ಕಾರ ನಿರ್ಧರಿಸಿದ್ದನ್ನು ಬ್ಯಾಂಕಿಂಗ್ ಮತ್ತು ವ್ಯಾಪಾರ ವಲಯಗಳು ಸ್ವಾಗತಿಸಿವೆ.

ವಿಶ್ವದ ಕೇಂದ್ರ ಬ್ಯಾಂಕುಗಳಲ್ಲಿ ಸುಮಾರು ೪೦೦೦ ಕೋಟಿ ಡಾಲರ್ ಮೌಲ್ಯದ ಚಿನ್ನವಿದೆ. ಅಂತರರಾಷ್ಟ್ರೀಯ ಹಣ ನಿಧಿಯ ಕಟ್ಟುಪಾಡಿನಿಂದಾಗಿ ಇದರಿಂದ ಯಾವ ವ್ಯಾಪಾರ ವ್ಯವಹಾರಗಳನ್ನೂ ಮಾಡುವಂತಿಲ್ಲ. ಇದಕ್ಕೆ ಪಾಲನ ಮತ್ತು ರಕ್ಷಣಾ ವೆಚ್ಚ ಬೇರೆ ತಗಲುವುದು. ಎಂಥಾ ಕಷ್ಟಸ್ಥಿತಿ ಬಂದಾಗ್ಯೂ ಸರ್ಕಾರ ಈ ಚಿನ್ನದ ತಂಟೆಗೆ ಹೋಗದಿರುವುದು ಊಟಕ್ಕಿಲ್ಲದ ಉಪ್ಪಿನಕಾಯಿಯಂತೆ ಎಂಬ ಟೀಕೆ ಇದೆ. ಎಲ್ಲಿಂದಲೋ ಅಗೆದು ತರುವುದಂತೆ, ಇನ್ನೆಲ್ಲೋ ಶೇಖರಿಸುವುದಂತೆ. ಇದೆಂಥ ಮೂರ್ಖತನ ಎಂದು ಕೇನ್ಸ್ ಇದನ್ನು ಖಂಡಿಸಿರುತ್ತಾನೆ. ಸ್ನಾನಗೃಹದ ಗೋಡೆ ಅಲಂಕಾರಕ್ಕೆ ಸರಿಯಾಗಿದೆ ಎಂದು ಲೆನಿನ್ ಇದನ್ನು ಹೀಯಾಳಿಸಿದ್ದಾನೆ. ದಂತ ಜೋಡಣೆಗೆ ಲಾಯಕ್ಕಾಗಿದೆ ಎಂದರು ಹಲವರು. ಇಂದಿನ ಹಣದ ಸ್ಥಿರತೆ ಹಾಗೂ ನೋಟು ಚಲಾವಣೆ ಪದ್ಧತಿ ವಿದೇಶಿ ವಿನಿಮಯ ಪ್ರತಿಭೂತಿ ಗಳಿಕೆಯನ್ನು ಅವಲಂಬಿಸಿರುವುದೇ ವಿನಾ ಚಿನ್ನವನ್ನಲ್ಲ. ಸ್ವರ್ಣಾಧಾರಿತ ನೋಟು ಪದ್ಧತಿ ಅನುಷಂಗಿಕವಾಗಿದೆ.

ಬ್ರೆಟನ್ ವುಡ್ಸ್ ವ್ಯವಸ್ಥೆಯ ಪತನಕ್ಕೆ ಚಿನ್ನ ಭಾಗಶಃ ಕಾರಣವಾಗಿದೆ. ಚಿನ್ನದ ಬೆಲೆಯ ಸಮಸ್ಯೆ ಹೊಸದೇನಲ್ಲ. ಸ್ವರ್ಣೋತ್ಪಾದಕ ರಾಷ್ಟ್ರಗಳು ಏರುವ ಬೆಲೆಯನ್ನೇ ಅಪೇಕ್ಷಿಸುತ್ತವೆ. ಡಾಲರ್–ಚಿನ್ನದ ಪರಿವರ್ತನೆಗೆ ಬ್ರೆಟನ್ ವುಡ್ಸ್ ಒಪ್ಪಂದ ಅವಕಾಶ ಮಾಡಿಕೊಟ್ಟಿತ್ತು. ಇಂದಿನ ಖಾರಿ ಯುದ್ಧದಂತೆ ಅಂದು ೧೯೬೬–೬೯ ಅಮೆರಿಕ–ವಿಯಟ್ನಾಂ ಸಮರ. ಇದರ ವೆಚ್ಚ ೫೭,೦೦೦ ಕೋಟಿ ಡಾಲರ್‌ಗಳು. ಇದರಿಂದ ಅಮೆರಿಕದ ಆರ್ಥಿಕ ಪರಿಸ್ಥಿತಿ ಹದಗೆಟ್ಟು ಡಾಲರಿನ ಅಪಮೌಲ್ಯ ಅನಿವಾರ್ಯವಾಯಿತು. ಇದನ್ನು ಮೊದಲೇ ಊಹಿಸಿದ್ದ ಬೃಹತ್ ರಾಷ್ಟ್ರಗಳು ತಮ್ಮ ಡಾಲರ್ ಗಳಿಕೆಯನ್ನು ಚಿನ್ನಕ್ಕೆ ಪರಿವರ್ತಿಸಿಕೊಳ್ಳಲು ನಿರ್ಧರಿಸಿದುವು. ವಿಶ್ವಪೇಟೆಗಳಲ್ಲಿ ಚಿನ್ನಕ್ಕೆ ಎಲ್ಲಿಲ್ಲದ ನೂಕುನುಗ್ಗಲು ಶುರುವಾಯಿತು. ಚಿನ್ನದ ಒತ್ತಡ ತಾಳಲಾರದೆ ಅಮೆರಿಕ ದಕ್ಷಿಣ ಆಫ್ರಿಕದ ನೆರವನ್ನು ನಿರೀಕ್ಷಿಸಿತು. ಆದರೆ ದಕ್ಷಿಣ ಆಫ್ರಿಕ ಸಹಕರಿಸಲಿಲ್ಲ. ಆಗ ಅದು ಡಾಲರ್–ಚಿನ್ನದ ಪರಿವರ್ತನೀಯತೆಯನ್ನು ರದ್ದುಗೊಳಿಸಿತು. ವಿಶ್ವದ ಪ್ರಮುಖ ಪೇಟೆಗಳು ಮುಚ್ಚಿದುವು. ಈ ಪರಿಸ್ಥಿತಿಯನ್ನು ದಿ ಮ್ಯಾಡ್ ಮ್ಯಾಡ್ ಗೋಲ್ಡ್ ರಶ್ ಎಂದು ಕರೆದು ಅರ್ಥ ಪಂಡಿತರು ಹುಬ್ಬೇರಿಸಿದರು. ಗಲಭೆ ಎಬ್ಬಿಸಿದ ಡಾಲರ್

ಮುಗ್ಗರಿಸಿತು. ಎಲ್ಲಾ ಈ ಡಾಲರ್ ಚಿನ್ನದಿಂದಲೇ ಎಂದು ಶಪಿಸಿದ ವಿಶ್ವ, ನೂತನ ಸುಧಾರಣೆಯತ್ತ ಆಲೋಚಿಸಿತು. ೧೯೭೦ ರಲ್ಲಿ ಹೊಸ ವಿಶ್ವ ಹಣ ವ್ಯವಸ್ಥೆಯ ಉಗಮವಾಯಿತು. ಇದೇ ಸಾಲ ಪಡೆಯುವ ವಿಶೇಷ ಹಕ್ಕು ಅಥವಾ ವಿಶೇಷ ಡ್ರಾಯಿಂಗ್ ಹಕ್ಕು-ಎಸ್‌ಡಿಆರ್ ಅಥವಾ ಕಾಗದ ಚಿನ್ನ. ಒಂದು ಎಸ್‌ಡಿಆರ್ ೦.೮೯ ಗ್ರಾಂ ಚಿನ್ನಕ್ಕೆ ಸಮ ಅಥವಾ ೧.೨೧ ಡಾಲರಿಗೆ ಸಮ. ಆದರೆ ಎಸ್‌ಡಿಆರ್ ಅನ್ನು ಚಿನ್ನಕ್ಕೆ ಪರಿವರ್ತಿಸುವಂತಿಲ್ಲ. ಇದಕ್ಕೆ ಬದಲು ಡಾಲರು, ಪೌಂಡು, ಯೆನ್, ಫ್ರಾಂಕ್ ಮತ್ತು ಮಾರ್ಕ್‌ಗಳಿಗೆ ಪರಿವರ್ತಿಸಿಕೊಳ್ಳಬಹುದು. ಇದೇ ಅಂತರರಾಷ್ಟ್ರ ಹಣಕಾಸು ನಿಧಿಯ ಚಲಾರ್ಥಗಳ ಬುಟ್ಟಿ ಅಥವಾ ಬ್ಯಾಸ್ಕೆಟ್ ಆಫ್ ಕರೆನ್ಸೀಸ್ ಹಾಗೂ ವಿಶ್ವದ್ರವತ್ವ. ಅರ್ಥ ವ್ಯವಸ್ಥೆಯಲ್ಲಿ ಚಿನ್ನದಿಂದುಂಟಾಗುವ ತೊಂದರೆಗಳನ್ನು ತಡೆಗಟ್ಟುವುದು ಈ ನೂತನ ಪದ್ಧತಿಯ ಉದ್ದೇಶಗಳಲ್ಲೊಂದಾಗಿದೆ.

### ಉತ್ಪಾದನೆ, ವ್ಯಾಪಾರ

ವಿಶ್ವದ ಸುಮಾರು ೪೦೦೦ ಟನ್ನುಗಳಷ್ಟು ಚಿನ್ನದ ಉತ್ಪಾದನೆಯಲ್ಲಿ ದಕ್ಷಿಣ ಆಫ್ರಿಕಾದ ಪಾಲು ಶೇಕಡ ೬೫. ವಿಶ್ವದ ಚಿನ್ನದ ಪ್ರಮುಖ ಪೂರೈಕೆಯೂ ಇದರಿಂದಲೇ. ರಷ್ಯಾ, ಕೆನಡ, ಅಮೆರಿಕ ಮತ್ತು ಆಸ್ಟ್ರೇಲಿಯಾ ಇವು ಇತರ ಸ್ವರ್ಣೋತ್ಪಾದಕ ರಾಷ್ಟ್ರಗಳಾಗಿವೆ. ಇವು ವಿಶ್ವ ಸ್ವರ್ಣ ಸಮಿತಿ ಎಂಬ ಒಕ್ಕೂಟ ಸಂಸ್ಥೆಯನ್ನು ಸ್ಥಾಪಿಸಿವೆ. ಚಿನ್ನದ ಗಣಿ ಉದ್ಯಮ ಸರ್ಕಾರದ ಏಕಸ್ವಾಮ್ಯಕ್ಕೆ ಒಳಪಟ್ಟಿದೆ. ಚಿನ್ನದ ಇಟ್ಟಿಗೆ, ದಾಳ ಮತ್ತು ಬಿಲ್ಲೆಗಳು ಗಣಿಗೆ ಸೇರಿದ ಸ್ವರ್ಣ ಶುದ್ಧೀಕರಣ ಕೇಂದ್ರಗಳಿಂದ ಹೊರಬರುವುವು. ಇವುಗಳ ಮೇಲೆ ಸರ್ಕಾರದ ಅಥವಾ ಕೇಂದ್ರ ಬ್ಯಾಂಕಿನ ಮುದ್ರೆ ಇರುವುದು. ಇಂಗ್ಲೆಂಡಿನ ರಾಜರಾಣಿಯರ ಮುದ್ರೆ ಇರುವ ಸಾವರಿನ್, ಕೆನಡಾದ ೯೯ ಮತ್ತು ಸ್ವಿಸ್ ಬ್ಯಾಂಕಿನ ಮುದ್ರೆ ಇರುವ ಚಿನ್ನದ ನಾಣ್ಯ, ಬಿಲ್ಲೆ ಮತ್ತು ಬಿಸ್ಕತ್ತುಗಳು ಅಪ್ಪಟ ಹಾಗೂ ವಿಖ್ಯಾತ. ಇತರ ಲೋಹ ಮಿಶ್ರಿತವಾದ ಚಿನ್ನವೂ ಇದೆ. ೧೦ ರಿಂದ ೨೪ ಕ್ಯಾರೆಟ್‌ಗಳವರೆಗೆ ಗುಣಮಟ್ಟದಲ್ಲಿ ವ್ಯತ್ಯಾಸಗಳಿವೆ. ಇದರ ಆಧಾರದ ಮೇಲೆ ಭಾರತೀಯ ಬ್ಯಾಂಕುಗಳು ಸ್ವರ್ಣ ಸಾಲಗಳನ್ನು ಕೊಡುವುವು. ಚಿನ್ನದ ಗಟ್ಟಿ ಕೇಂದ್ರ ಬ್ಯಾಂಕಿನ ತಿಜೋರಿ ಸೇರುವುದು. ದಾಳ, ಬಿಲ್ಲೆ ಮತ್ತು ನಾಣ್ಯಗಳು ವ್ಯಾಪಾರಿಗಳನ್ನು ಸೇರುವುವು. ಚಿನ್ನವನ್ನು ಬಳಸುವ ಉದ್ಯಮಗಳ ಪೈಕಿ ಗಡಿಯಾರ, ಜರಿ ತಯಾರಿಕೆ, ಚಿನ್ನದ ಮುಲಾಮು ಹಾಗೂ ಗಿಲೀಟು ಹಾಗೂ ಆಭರಣ ತಯಾರಿಕೆ ಪ್ರಮುಖವಾದವು. ಕ್ರೀಡಾ ಜಗತ್ತಿನಲ್ಲಿಯೂ ಸಾಕಷ್ಟು ಚಿನ್ನದ ಬಳಕೆ ಇದೆ.

ಭಾರತದಲ್ಲಿ ಸ್ವರ್ಣ ನಿಕ್ಷೇಪ ಪತ್ತೆಯಾದದ್ದು ಆಕಸ್ಮಿಕ. ನಮ್ಮ ರಾಜ್ಯದ ಗಡಿಯಲ್ಲಿ ಈಸ್ಟ್ ಇಂಡಿಯಾ ಕಂಪೆನಿ ಸಮೀಕ್ಷೆ ನಡೆಸುತ್ತಿದ್ದಾಗ ಈಗಿನ ಉರಿಗಾಂ ಪತ್ತೆಯಾಯಿತು. ೧೮೮೦ ರಲ್ಲಿ ಇಂಗ್ಲೆಂಡಿನ ಟೇಲರ್ ಕಂಪೆನಿ ಕೋಲಾರದ ಚಿನ್ನದ ಗಣಿಯನ್ನು ಸ್ಥಾಪಿಸಿತು. ಮೊದಲನೆಯ ಮಹಾಯುದ್ಧದವರೆಗೂ ಇಲ್ಲಿಂದ ಇಂಗ್ಲೆಂಡಿಗೆ ಚಿನ್ನದ ರವಾನೆಯಾಗುತ್ತಿತ್ತು. ಅನಂತರ ಬೊಂಬಾಯಿಯಲ್ಲಿ ಟಂಕಸಾಲೆ ಸ್ಥಾಪಿತವಾಯಿತು. ಚಿನ್ನದ ಗಣಿ ಉದ್ಯಮ ವ್ಯವಸ್ಥಿತ ಮಾರ್ಗದತ್ತ ಹೆಜ್ಜೆ ಇಟ್ಟಿತು. ಉರಿಗಾಂನ ಛಾಂಪಿಯನ್ ರೀಫ್ ವಿಶ್ವದಲ್ಲೇ ೨ನೆಯ ಆಳವಾದ ಚಿನ್ನದ ಗಣಿ. ದಕ್ಷಿಣ ಆಫ್ರಿಕಾದ ವಿಟ್ವಾಟರ್ಸ್ ರ‍್ಯಾಂಡ್ ಮೊದಲನೆಯದು. ರಾಯಚೂರಿನ ಹಟ್ಟಿ, ಕೋಲಾರದ ಉರಿಗಾಂ, ಮೈಸೂರು ಮತ್ತು ನಂದಿದುರ್ಗ ಗಣಿಗಳು ಪ್ರಮುಖ ಚಿನ್ನದ ಗಣಿಗಳು. ಭಾರತದಲ್ಲಿ ಚಿನ್ನದ ಉತ್ಪಾದನೆ ಎರಡು ಟನ್ನುಗಳಿಗೂ ಕಡಿಮೆ. ವಿಶ್ವದಲ್ಲಿ ಕಳೆದ ೧೧೦ ವರ್ಷಗಳಿಂದ ಒಂದೂವರೆ ಲಕ್ಷ ಟನ್ ಚಿನ್ನ ಉತ್ಪತ್ತಿಯಾಗಿದ್ದರೆ ಭಾರತದಲ್ಲಿ ೮೦೬ ಟನ್ನುಗಳು. ಭಾರತೀಯ ಭೂವಿಜ್ಞಾನ ಸಮೀಕ್ಷೆಯ ಪ್ರಕಾರ ಕೋಲಾರದ ನಿಕ್ಷೇಪ ಇನ್ನು ೧೦ ವರ್ಷಗಳವರೆಗೆ ಮಾತ್ರ ದೊರೆಯುವುದು. ಹೊಸ ನಿಕ್ಷೇಪಗಳನ್ನು ಆಂಧ್ರದ ಚಿತ್ತೂರು, ಅನಂತಪುರ, ಮಧ್ಯಪ್ರದೇಶದ ರಾಯಪುರ, ಕರ್ನಾಟಕದ ಗದಗ್ ಮತ್ತು ಕೇರಳದ ನಿಕಂಬು ಕಣಿವೆಗಳಲ್ಲಿ ಗುರುತಿಸಲಾಗಿದೆ. ಕಾರ್ಯರೂಪಕ್ಕೆ ಬರುವುದು ಇವುಗಳ ಆರ್ಥಿಕ ಸಾಧ್ಯಾಸಾಧ್ಯತೆಗಳನ್ನು ಅವಲಂಬಿಸಿದೆ. ಇಂದಿನ ಪರಿಸ್ಥಿತಿ ಅಷ್ಟೇನೂ ಲಾಭದಾಯಕವಾಗಿಲ್ಲ. ಒಂದು ಟನ್ ಅದುರಿನಿಂದ ಸಿಗುವ ಚಿನ್ನ ಕೇವಲ ೫ ಗ್ರಾಂಗಳು. ಕೆಜಿಎಫ್ ಅನ್ನು ಮುಚ್ಚಲು ಹಿಂದೆಯೇ ಮೊರಾರ್ಜಿ ಸರ್ಕಾರ ನಿರ್ಧರಿಸಿತ್ತು. ಆದರೆ ಭಾರತದ ಗೌರವ ಪ್ರತಿಷ್ಠೆಯ ಏಕೈಕ ಚಿನ್ನದ ಗಣಿ ಎಂಬ ವಾದದಿಂದ ಇದನ್ನು ಮುಚ್ಚುವ ನಿರ್ಧಾರವನ್ನು ಕೈಬಿಡಲಾಯಿತು.

ಜಿನೀವಾದ ವಿಶ್ವ ಸ್ವರ್ಣಸಂಸ್ಥೆ ವಿಶ್ವದ ಎಲ್ಲ ಚಿನ್ನದ ವ್ಯಾಪಾರಿಗಳ ಒಕ್ಕೂಟ. ನ್ಯೂಯಾರ್ಕ್, ಲಂಡನ್, ಟೋಕಿಯೋ, ಹಾಂಕಾಂಗ್ ಮತ್ತು ಬೊಂಬಾಯಿ ಪ್ರಮುಖ ಸ್ವರ್ಣ ಪೇಟೆಗಳು. ತಕ್ಷಣದ ಹಾಗೂ ವಾಯಿದಾ ವಹಿವಾಟುಗಳೆರಡೂ ಇವೆ. ಸಮರಗಳಲ್ಲಿ ಚಿನ್ನದ ವರ್ತನೆ ವಿಚಿತ್ರ ಹಾಗೂ ಆಳತೆಗೆ ಮೀರಿದ್ದು. ಇತ್ತೀಚಿನ ಖಾರಿ ಯುದ್ಧದಲ್ಲಿ ಚಿನ್ನದ ವ್ಯಾಪಾರಿಗಳು ಬೆಲೆಗಳ ಏರಿಳಿತದಲ್ಲಿ ಸಿಕ್ಕಿ ಸಿಹಿಕಹಿಗಳನ್ನನುಭವಿಸಿದ್ದಾರೆ. ಯುದ್ಧ ಸಂಭವಿಸುತ್ತಿದ್ದಂತೆಯೇ ಬೆಲೆ ಏರಿತು. ಜಿನೀವಾ ಮಾತುಕತೆ ಎನ್ನುತ್ತಲೇ ಇಳಿಯಿತು. ಮಾತುಕತೆ ವಿಫಲ ಎಂದಾಗ ಬೆಲೆ ಮತ್ತೆ ಏರಿತು. ಕೇವಲ ೫ ನಿಮಿಷಗಳ ಅವಧಿಯಲ್ಲಿ ದಳ್ಳಾಳಿಗಳು ೯ ಡಾಲರ್ ನಷ್ಟ ಅನುಭವಿಸಿದರು. ಮತ್ತು ೨೫ ದಿವಸಗಳ ಅವಧಿಯಲ್ಲಿ ಚಿನ್ನದ ಬೆಲೆಯಲ್ಲಿ ೫೦ ಡಾಲರ್ ಕುಸಿತ ಎಂದು ವಿಶ್ವ ಸ್ವರ್ಣ ಸಂಸ್ಥೆ ವರದಿ ಮಾಡಿದೆ. ಚಿನ್ನದ ಶೇಖರಣೆಗೆ ತಾತ್ಕಾಲಿಕ ನೂಕು ನುಗ್ಗಲಿತ್ತು. ಸ್ವಿಸ್ ಬ್ಯಾಂಕುಗಳಿಂದ ೫೦೦ ಕಿಲೋ ಗ್ರಾಂ ಚಿನ್ನದ ಗಟ್ಟಿಗಳು ಮಾರಾಟವಾದುವು. ಮತ್ತೊಂದು ಸೋಜಿಗವೆಂದರೆ, ಚಿನ್ನದ ಪೇಟೆಯಲ್ಲಿ ರಷ್ಯಾ ಭಾಗವಹಿಸುವಿಕೆ. ಇದರಿಂದ ಚಿನ್ನದ ಪೂರೈಕೆ ಸಡಿಲಗೊಂಡು ಬೆಲೆ ಏರಲಿಲ್ಲ. ಯುದ್ಧ ಮುಗಿದರೂ ಯಥಾಸ್ಥಿತಿ ದೂರ. ಖಾರಿ ರಾಷ್ಟ್ರಗಳ ಪುನಃಶ್ಚೇತನವಾಗುವವರೆಗೂ ಚಿನ್ನದ ಸಕ್ರಿಯ ಪಾತ್ರವೂ ದೂರ

ಎಂದು ಸ್ವಿಸ್ ಬ್ಯಾಂಕ್ ಸಲಹೆಗಾರ ಹಾಗೂ ಸ್ವರ್ಣ ವಿಶ್ಲೇಷಕ ಆಂಡಿ ಸ್ಮಿತ್ ಅಭಿಪ್ರಾಯಪಟ್ಟಿದ್ದಾರೆ.

ವಿಶ್ವದ ಚಿನ್ನದ ವ್ಯಾಪಾರ ವಹಿವಾಟಿನಲ್ಲಿ ಭಾರತದ ಪಾಲು ಶೇ. ೨೮. ಜಪಾನ್, ಟೈವಾನ್, ಮತ್ತು ಅಮೆರಿಕ ವಿಶ್ವದ ಪ್ರಮುಖ ಸ್ವರ್ಣಾಮದುದಾರ ರಾಷ್ಟ್ರಗಳಾಗಿವೆ. ಆಭರಣ ತಯಾರಿಕೆಯಲ್ಲಿ ಇಟಲಿ ಅಗ್ರ ರಾಷ್ಟ್ರ. ವಿಶ್ವದಲ್ಲಿ ಆಭರಣ ತಯಾರಿಕೆಗೆ ಸುಮಾರು ೨೫೦೦ ಟನ್‌ಗಳಷ್ಟು ಚಿನ್ನವನ್ನು ಬಳಸಲಾಗುತ್ತಿದೆ. ೧೯೯೦ ರಲ್ಲಿ ಜಪಾನ್ ೧೧೮ ಟನ್ ಚಿನ್ನವನ್ನು ಆಮದು ಮಾಡಿಕೊಂಡಿತು. ಆಭರಣಗಳ ರಫ್ತು ವ್ಯಾಪಾರದಲ್ಲಿ ಭಾರತ ಇಟಲಿಯೊಂದಿಗೆ ಪೈಪೋಟಿ ನಡೆಸುತ್ತಿದೆ. ಭಾರತದಲ್ಲಿ ಇತ್ತೀಚೆಗೆ ನಡೆದ ಆಭರಣ ಯಾತ್ರಾ ಪ್ರದರ್ಶನದಲ್ಲಿ ಒಳ್ಳೆ ವ್ಯಾಪಾರ ಒಪ್ಪಂದಗಳಾಗಿವೆ. ಭಾರತದ ವಿವಿಧ ವಿನ್ಯಾಸಗಳ ಆಭರಣಗಳಿಗೆ ಜಪಾನ್ ಮತ್ತು ಅರಬ್ ರಾಷ್ಟ್ರಗಳಲ್ಲಿ ಒಳ್ಳೆಯ ಬೇಡಿಕೆ ಇದೆ. ಭಾರತದ ರತ್ನಾಭರಣಗಳ ರಫ್ತು ಮತ್ತು ಪ್ರವರ್ತನ ಸಮಿತಿ ಹಾಗೂ ಕರಕುಶಲ ಮತ್ತು ಕೈಮಗ್ಗ ರಫ್ತು ನಿಗಮದ ವತಿಯಿಂದ ೧೯೯೦ ರಲ್ಲಿ ಸುಮಾರು ರೂ. ೩೦೦ ಕೋಟಿಯ ವಿದೇಶಿ ವಿನಿಮಯ ಗಳಿಕೆಯಾಯಿತು. ಅನಿವಾಸಿ ಭಾರತೀಯರು ೨೦೦ ಗ್ರಾಂ ಚಿನ್ನ ತರಬಹುದು, ಶೇ. ೫೦ರಷ್ಟು ಸರ್ಕಾರಕ್ಕೆ ಮಾರಬೇಕು ಎಂಬ ಸರ್ಕಾರದ ಯೋಜನೆಯನ್ನು ವ್ಯಾಪಾರ ವಲಯಗಳು ಸ್ವಾಗತಿಸಿವೆ.

ಸ್ವರ್ಣ ಶುದ್ಧೀಕರಣ ಇದೀಗ ಸರ್ಕಾರದ ಏಕ ಸ್ವಾಮ್ಯದಿಂದ ಹೊರಬಂದಿದೆ. ರಾಷ್ಟ್ರೀಯ ಶುದ್ಧೀಕರಣ ಖಾಸಗಿ ನಿಯಮಿತ ಸಂಸ್ಥೆ ಬೊಂಬಾಯಿ, ಹಾಗೂ ಇನ್ನೂ ಮೂರು ಆಭರಣ ಸಂಸ್ಥೆಗಳು ಖಾಸಗಿ ಕ್ಷೇತ್ರದಲ್ಲಿ ಬರಲಿವೆ ಎಂದು ಮುಂಬೈ ಸ್ವರ್ಣ ಸಂಘ ಹೇಳಿಕೆಯನ್ನಿತ್ತಿದೆ. ಸ್ವರ್ಣ ನಿಯಂತ್ರಣ ಅಧಿನಿಯಮವನ್ನು ಸಡಿಲಗೊಳಿಸಿದ್ದು ಇವುಗಳಿಗೆ ಸ್ಫೂರ್ತಿಯನ್ನು ಕೊಟ್ಟಿದೆ. ಭಾರತದಲ್ಲಿ ಲೈಸೆನ್ಸ್ ಹೊಂದಿರುವ ಒಟ್ಟು ೧೬,೦೦೦ ಚಿನ್ನದ ವ್ಯಾಪಾರಿಗಳಿದ್ದಾರೆ ಮತ್ತು ೩,೫೦,೦೦೦ ಅಕ್ಕಸಾಲಿಗರಿದ್ದಾರೆ.

### ಕಳ್ಳಸಾಗಣೆ

ಇದೊಂದು ಬಗೆಹರಿಯದ ಸಮಸ್ಯೆ. ಕಾರಣ, ಇದರ ಜಾಲ ಭೇದಿಸಲಾಗದಂಥಾದ್ದು. ಸಟ್ಟಾ ವ್ಯಾಪಾರ, ಸಮರಗಳಲ್ಲಿ ಆದಷ್ಟು ಚಿನ್ನವನ್ನು ಶೇಖರಿಸುವುದು. ಸಂದರ್ಭಾನುಸಾರ ವಿಕ್ರಯಿಸುವುದು ಇವು ಕಳ್ಳಕೂಟ ಹಾಗೂ ಭೂಗತ ಜಗತ್ತಿನ ಗ್ಯಾಂಗುಗಳು ಅಳವಡಿಸುವ ತಂತ್ರವ್ಯೂಹಗಳು. ಇವರ ಕಳ್ಳಸಾಗಣೆ ವಿಧಾನ ಅತ್ಯದ್ಭುತವಾದುದು. ಮದರಾಸಿನ ಮುಖ್ಯ ಸುಂಕ-ತೆರಿಗೆ ಅಧಿಕಾರಿ ಗೋಪಾಲನಾಥನ್ನರ ಪ್ರಕಾರ ಬೂಟುಗಳ ಹಿಮ್ಮಡಿ, ಬೆಲ್ಟುಗಳು, ಕೋಟಿನ ಲೈನಿಂಗ್, ಬಾದಾಮಿ ಚೂರುಗಳ ಮಧ್ಯೆ, ಗ್ರೈಂಡರ್ ಮಿಕ್ಸರ್, ವಾಷಿಂಗ್ ಯಂತ್ರ , ರೇಡಿಯೋ ಸ್ಪೀಕರುಗಳಲ್ಲಿ, ಫೋಟೋ ಅಲ್ಬಮ್‌ಗಳಲ್ಲಿ, ಮಕ್ಕಳ ಬಟ್ಟೆಕೊಂಡಿಗಳಲ್ಲಿ ಮುಂತಾದ ವಿಚಿತ್ರ ವಿಧಾನಗಳಲ್ಲಿ ಕಳ್ಳಸಾಗಣೆಯಾಗುತ್ತಿದೆ. ಎಲ್‌ಟಿಟಿಇಗಳು ರಾಮನಾಡ್ ತೀರ ಪ್ರದೇಶಗಳಲ್ಲಿ ಧಾನ್ಯ, ಸೀಮೆಎಣ್ಣೆ ಡೀಸಲ್, ಮತ್ತು ಹಲವಾರು ಅಗತ್ಯ ವಸ್ತುಗಳಿಗೆ ಚಿನ್ನವನ್ನು ವಿನಿಮಯಿಸಿಕೊಳ್ಳುವುದು ವರದಿಯಾಗಿದೆ. ಶ್ರೀಲಂಕಾದಲ್ಲಿ ಕೆಲವು ಖಾಸಗಿ ಬ್ಯಾಂಕುಗಳಿಗೆ ಸ್ವಿಸ್ ಬ್ಯಾಂಕುಗಳಂತೆ ವ್ಯವಹರಿಸಲು ಅನುಮತಿ ನೀಡಲಾಗಿದೆ. ಪ್ರತಿ ವರ್ಷ ಭಾರತಕ್ಕೆ ಸರಾಸರಿ ೧೩೦ ಟನ್ ಚಿನ್ನ ಕಳ್ಳಸಾಗಣೆಯಾಗುತ್ತಿದೆ. ೧೯೯೦ ರಲ್ಲಿ ದೇಶಾದ್ಯಂತ ೧೭೦ ಟನ್ ಚಿನ್ನವನ್ನೂ, ಮದರಾಸಿನಲ್ಲೇ ೭೦೦ ಕೋಟಿ ರೂಪಾಯಿಗಳಷ್ಟು ಚಿನ್ನವನ್ನೂ ವಶಪಡಿಸಿಕೊಳ್ಳಲಾಯಿತು. ಲೋಹ ಪತ್ತೇದಾರಿ ಯಂತ್ರ, ಕಡಲತೀರ ಪಹರೆ ವ್ಯವಸ್ಥೆ ಮತ್ತು ಪತ್ತೇದಾರಿ ಜಾಲವನ್ನು ಇಮ್ಮಡಿಸಿ ಬಿಗಿಗೊಳಿಸಿರುವುದರಿಂದ ಚಿನ್ನದ ಕಳ್ಳಸಾಗಣೆ ಇಳಿಮುಖವಾಗಿದೆ. ಎರಡು ದಶಕಗಳಲ್ಲಿ, ಅಂದರೆ ೧೯೬೧ ರಿಂದ ೧೯೮೦ರವರೆಗೆ ಚಿನ್ನದಲ್ಲಿ ಶೇ ೧೬೩೦ ರಷ್ಟು ಬೆಲೆ ಏರಿಕೆಯಾಗಿದ್ದರೆ ೧೯೮೦-೯೦ರ ದಶಕದಲ್ಲಿ ಚಿನ್ನದ ಬೆಲೆ ಏರಿಕೆ ಕೇವಲ ಶೇ. ೧೧೦. ಇದರಿಂದ ಕಳ್ಳಸಾಗಣೆ ಇಳಿಮುಖವಾಗಿರುವುದು ಸ್ಪಷ್ಟವಾಗಿ ಕಾಣಬರುವುದು. [ಅಂಕಿ ಅಂಶಗಳು ಎಕನಾಮಿಕ್ ಟೈಮ್ಸ್ ೫ ಮಾರ್ಚ್ ೧೯೯೧.] ವಶಪಡಿಸಿಕೊಂಡ ಚಿನ್ನವನ್ನು ಆಭರಣಗಳಾಗಿ ರಫ್ತು ಮಾಡಲಾಗುವುದು. ಭಾರತೀಯ ಸ್ಟೇಟ್ ಬ್ಯಾಂಕ್ ಮೂಲಕ ಸ್ವಲ್ಪ ಚಿನ್ನವನ್ನು ಬಿಡುಗಡೆ ಮಾಡಲು ಸರ್ಕಾರ ನಿರ್ಧರಿಸಿದೆ. ಭಾರತೇತರ ದೇಶಗಳಲ್ಲಿ ಚಿನ್ನದ ಮೇಲಿನ ಹತೋಟಿ ಅಷ್ಟು ಬಿಗಿಯಾಗಿಲ್ಲದಿರುವುದು ಕಳ್ಳಸಾಗಣೆಗೆ ಒತ್ತುಕೊಟ್ಟಂತಿದೆ. ಮಧ್ಯಪ್ರಾಚ್ಯ ದೇಶಗಳಲ್ಲಿ ಸಣ್ಣ ಅಂಗಡಿಗಳಲ್ಲಿ ಚಿನ್ನದ ವಹಿವಾಟಿದೆ. ಸ್ವಿಸ್ ಬ್ಯಾಂಕುಗಳಲ್ಲಿ ಯಾವ ಮುಂಗಟ್ಟೆಯಲ್ಲಾಗಲಿ ನೇರವಾಗಿ ಚಿನ್ನದ ವ್ಯಾಪಾರ ಮಾಡಬಹುದು. ಭಾರತದಲ್ಲಿ ಯಾವ ವ್ಯಕ್ತಿಯೂ ಚಿನ್ನವನ್ನು ಆಮದು ಮಾಡುವಂತಿಲ್ಲ.

### ಚಿನ್ನ ಮತ್ತು ಸಂಸ್ಕೃತಿ

ಮಾನವನಿಗೆ ಚಿನ್ನದ ಮೇಲೆ ಅತಿಯಾದ ವ್ಯಾಮೋಹವಿದೆ. ಇದಕ್ಕೆ ಹಲವಾರು ಕಾರಣಗಳಿವೆ:

೧. ಇದರ ಸ್ವಾಭಾವಿಕ ಗುಣಗಳಿಂದ ಆಕರ್ಷಣೆ – ಅಂದರೆ ಹೊಳಪಿನ ಸೌಂದರ್ಯ, ಅನನ್ಯತೆ, ಮೃದುತ್ವ, ಸುವಾಹಕತೆ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸಿರಿತನದ ಸಂಕೇತವಾಗಿದೆ. ಗಾಳಿ ಬೆಳಕಿನಂತೆ ಅದು ಯಥೇಚ್ಛವಾಗಿ ಸಿಗುವಂಥದಲ್ಲ.
೨. ಇದರ ಬೆಲೆ ಯಾವಾಗಲೂ ಏರುವಂಥದೇ. ಆದ್ದರಿಂದ ದೀರ್ಘಾವಧಿ ಹೂಡಿಕೆಗೆ ಇದು ಒಳ್ಳೆಯ ಸಾಧನ.
೩. ಅತಿಪ್ರಸರಣಗಳಿಂದುಂಟಾಗುವ ನಷ್ಟಗಳನ್ನು ತಡೆಗಟ್ಟುವ ಸಾಧನವಿದು. ಆದ್ದರಿಂದ ಹಣ ವಿನಿಯೋಜನೆಗೆ ಬೇರೆ ಲಾಭದಾಯಕವಾದ ಮೂಲಗಳಿದ್ದರೂ ಚಿನ್ನದ ಮೇಲೆ ಹಣ ಹೂಡಿಕೆಗೆ ಹೆಚ್ಚಿನ ಆದ್ಯತೆ ಇದೆ.

ಪುರಾಣೇತಿಹಾಸಗಳಿಂದಲೂ ಚಿನ್ನ ವೈಭವಯುತವಾಗಿಯೇ ಬಂದಿದೆ. ಚಿನ್ನದ ಮೈಕಾಂತಿಯುಳ್ಳ ಮಹಾಲಕ್ಷ್ಮಿಯೇ ಎಂದು ಶ್ರುತಿ ಉದ್ಘೋಷಿಸಿದೆ. ರಾಮಾಯಣದ ಕಾಲದಲ್ಲಿ ದ್ವಿಜರಿಗೆ ಚಿನ್ನದ ಗೋಲಿಗಳನ್ನು ದಕ್ಷಿಣೆಯಾಗಿ ಕೊಡುತ್ತಿದ್ದರು. ಆರ್ಯರು

ಅಪ್ಪಟ ಚಿನ್ನವನ್ನು ಶುಭ್ರತೆಯ ಪ್ರತೀಕವೆಂದು ಬಳಸುತ್ತಿದ್ದರು. ನಿಧಿಯಾಗಿ ಅಲ್ಲ. ಅದ್ಭುತ ಮೂಲಿಕೆಯ ಶಕ್ತಿ ಇದರಲ್ಲಿದೆ ಎಂದು ಚಿನ್ನದ ಪುಡಿಯನ್ನು ಔಷಧಿಯಾಗಿ ಬಳಸುತ್ತಿದ್ದರು. ಆಯುರ್ವೇದ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಚಿನ್ನದ ಗಣಿ ವ್ಯವಸ್ಥೆ, ಆಡಳಿತ ಮತ್ತು ನಾಣ್ಯಗಳ ಸುವರ್ಣವಾಪಕ ಬಗ್ಗೆ ಉಲ್ಲೇಖಗಳಿವೆ. ಭಾರತ ಸ್ವರ್ಣಭೂಮಿ ಎಂದು ಭಾವಿಸಿ ನಿಧಿಗಳ ರಾಜ ಸಾಲೋಮನ್ ಇದರ ಅನ್ವೇಷಣೆಯನ್ನು ತೀವ್ರಗೊಳಿಸಿದ್ದ. ಕ್ರಮೇಣ ಚಿನ್ನ ಅಧಿಕಾರ-ಐಶ್ವರ್ಯ-ಬಲಾಬಲಗಳ ಮೂಲವಾಯಿತು. ಚಿನ್ನವಿಲ್ಲದ ಮನೆ ದಾರಿದ್ರ್ಯದ ಸಂಕೇತವೆಂಬ ನಂಬಿಕೆ ಹಿಂದುಗಳಲ್ಲಿ ಮೂಡಿತು. ಎಂಥ ಬಡ ಕುಟುಂಬದಲ್ಲಿಯೂ ಸ್ವಲ್ಪ ಚಿನ್ನವಿದ್ದೇ ಇರುವುದು. ಜಿನೀವಾದ ವಿಶ್ವ ಸಂಸ್ಥೆಯ ಪ್ರಕಾರ ವಿಶ್ವದಲ್ಲಿರುವ ಸುಮಾರು ೧೨ ಸಾವಿರ ಟನ್ ಸ್ವಂತ ಚಿನ್ನದಲ್ಲಿ ೫೦೦೦ ಟನ್ ಭಾರತದಲ್ಲಿದೆ. ಇದರ ಮೌಲ್ಯ ೧೨ ಕೋಟಿ ರೂಪಾಯಿಗಳು. ಇದರಲ್ಲಿ ಸ್ವಲ್ಪ ಕಪ್ಪು ಹಣವೂ ಸೇರಿದೆ. ಇದರಿಂದ ೧೦ ಪಂಚವಾರ್ಷಿಕ ಯೋಜನೆಗಳ ವೆಚ್ಚವನ್ನು ತೂಗಿಸಬಹುದು ಅಥವಾ ೧೦೦೦ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಬಹುದು ಎಂದು ಖ್ಯಾತ ಸ್ವರ್ಣ ಪಂಡಿತ ತಿಮೊತಿ ಎಸ್. ಗ್ರೀನ್ ಹೇಳಿದ್ದಾರೆ. ೧೦೦೦ ಟನ್ನುಗಳಿಗೂ ಹೆಚ್ಚು ಚಿನ್ನ ದೇವಸ್ಥಾನ, ಅರಮನೆ, ಮಠ ಮಂದಿರಗಳಲ್ಲಿದೆ. ಪುರಿ ಜಗನ್ನಾಥ ದೇವಸ್ಥಾನದಲ್ಲಿ ಒಂದೂಕಾಲು ಲಕ್ಷ ತೊಲ ಬಂಗಾರದ ಒಡವೆಗಳಿವೆ. ತಿರುಪತಿ ದೇವರು ಜಗನ್ನಾಥನಿಗಿಂತ ಕಡಿಮೆಯೇನಿಲ್ಲ. ಮೈಸೂರಿನ ಅಂಬಾರಿ, ಅಮೃತಸರದ ಸ್ವರ್ಣಮಂದಿರ, ಸ್ವರ್ಣ ರಥಗಳು ಮತ್ತು ಉತ್ಸವಮೂರ್ತಿಗಳು ಸ್ವರ್ಣ ಸಂಸ್ಕೃತಿಯ ವೈಖರಿಯನ್ನು ಎತ್ತಿ ತೋರಿಸುತ್ತವೆ. ಜಪಾನ್, ಚೀನಾ, ಥೈಲಂಡ್‌ಗಳಲ್ಲಿ ಸ್ವರ್ಣಬುದ್ಧ ಪ್ರತಿಮೆಗಳಿಗೇನೂ ಕೊರತೆ ಇಲ್ಲ. ಆರೋಗ್ಯ ಭಾಗ್ಯ ಎಂಬ ಕಾರಣದಿಂದ ಜಪಾನಿನ ಪಂಚತಾರಾ ಹೋಟೆಲ್‌ಗಳಲ್ಲಿ ಸ್ನಾನದ ತೊಟ್ಟಿ ಅಪ್ಪಟ ಚಿನ್ನದ್ದು.

ಲಕ್ಷಣ, ಸಂಪ್ರದಾಯ ಎಂಬ ಹೆಸರುಗಳಲ್ಲಿ ಭಾರತೀಯ ಸ್ತ್ರೀಯರು, ಅದರಲ್ಲೂ ತಮಿಳು ನಾಡಿನ ನಾಟುಕೋಟೆ ಚೆಟ್ಟಿಯಾರ್‌ಗಳು, ವೈಶ್ಯರು, ಮರಾಠರು, ಬಂಗಾಳಿಗಳು ಆಭರಣಗಳನ್ನು ಹಾಕಿಕೊಂಡು ಮೆರೆಯುವುದು ರೂಢಮೂಲವಾಗಿ ಬಂದಿದೆ. ಡಾಂಭಿಕ ಪ್ರದರ್ಶನ ಹಾಗೂ ವರದಕ್ಷಿಣೆ ಪಿಡುಗು ಈ ಚೌಕಟ್ಟಿನಲ್ಲೇ ಸೇರಿದೆ. ಪಾಶ್ಚಾತ್ಯರಿಗೆ ಈ ಹುಚ್ಚು ಮತ್ತು ಸಂಪ್ರದಾಯ ಎರಡೂ ಇಲ್ಲ. ಮದುವೆ ಸಮಾರಂಭಗಳಲ್ಲಿ ಚಿನ್ನದ ಪಾತ್ರ ಹಿಮಾಲಯದ ಶಿಖರದಂತೆ. ಕರ್ನಾಟಕದ ತಾಳಿ ಭಾಗ್ಯ, ತಮಿಳುನಾಡಿನ ಎಂ.ಜಿ.ಆರ್ ಮಾಂಗಲ್ಯ ಪದಕ ಯೋಜನೆ ಚಿನ್ನದ ಬೇಡಿಕೆಗೆ ಒತ್ತು ಕೊಟ್ಟಿವೆ. 'ಎಲ್ಲಿಯವರೆಗೆ ಮದುವೆ-ಮಳೆಗಾಲವಿರುವುದೋ ಅಲ್ಲಿಯವರೆಗೆ ಚಿನ್ನವೂ ಶಾಶ್ವತವಾಗಿ ಮೆರೆಯುವುದು. ಅದರ ಬೇಡಿಕೆ ಮತ್ತು ಬೆಲೆ ಭಾರತದಲ್ಲಿ ಎಂದೂ ಕುಗ್ಗುವುದಿಲ್ಲ' ಎಂದು ದೆಹಲಿಯ ವಿಶ್ರಾಂತ ಪ್ರಾಧ್ಯಾಪಕ ಅಗರ್ವಾಲ್ ಸರಿಯಾಗಿ ಟೀಕೆ ಮಾಡಿದ್ದಾರೆ. ●

*ಬ್ಯಾಂಕಿಂಗ್ ಪ್ರಪಂಚ, ಜೂನ್ ೧೯೯೦*

# ಏಕ ಯೂರೋಪಿಯನ್ ಮಾರುಕಟ್ಟೆ ಮತ್ತು ಭಾರತದ ರಫ್ತು ವ್ಯಾಪಾರ

ಬಿ. ಎಸ್. ಚಂದ್ರಶೇಖರ

**ಯೂರೋಪಿನ ಹನ್ನೆರಡು ದೇಶಗಳ ಮಾರುಕಟ್ಟೆಗಳನ್ನು ಒಗ್ಗೂಡಿಸುವ ಯೋಜನೆ ೧೯೯೨ರ ಅಂತ್ಯದ ವೇಳೆಗೆ ಜಾರಿಗೆ ಬರಲಿದೆ. ಇದರಿಂದ ಕೆಲವು ದೇಶಗಳಿಗೆ ಆತಂಕ. ಭಾರತಕ್ಕೆ ಕೂಡ.**

ಯೂರೋಪಿಯನ್ ಆರ್ಥಿಕ ಸಮುದಾಯ ಭಾರತದ ರಫ್ತು ವ್ಯಾಪಾರದ ಅತಿ ದೊಡ್ಡ ಪಾಲುದಾರ. ಬೆಲ್ಜಿಯಂ, ಡೆನ್ಮಾರ್ಕ್, ಫ್ರಾನ್ಸ್, ಜರ್ಮನಿ, ಗ್ರೀಸ್, ಇಟಲಿ, ಐರ್ಲೆಂಡ್, ಲಕ್ಸೆಂಬರ್ಗ್, ನೆದರ್ಲೆಂಡ್, ಪೋರ್ಚುಗಲ್, ಸ್ಪೇನ್ ಮತ್ತು ಯುಕೆ – ಈ ಹನ್ನೆರಡು ದೇಶಗಳು ಯೂರೋಪಿಯನ್ ಆರ್ಥಿಕ ಸಮುದಾಯಕ್ಕೆ ಸೇರಿದ್ದು ಭಾರತದ ವಿದೇಶ ವ್ಯವಹಾರದ ಶೇ. ೨೯ ಭಾಗವನ್ನು ಈ ಸಮುದಾಯ ಹಂಚಿಕೊಂಡಿದೆ. ಸಿದ್ಧ ಉಡುಪುಗಳು, ಹತ್ತಿಬಟ್ಟೆ, ಚಹಾ, ಚರ್ಮ ಮತ್ತು ಕರಕುಶಲ ವಸ್ತುಗಳನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಭಾರತದಿಂದ ಆಮದು ಮಾಡಿಕೊಳ್ಳುವ ಈ ದೇಶಗಳು ಮುಂಬರುವ ವರ್ಷಗಳಲ್ಲಿ ಈ ವ್ಯವಹಾರವನ್ನು ತೀವ್ರವಾಗಿ ಅಧಿಕಗೊಳಿಸುವ ಸಂಭವ ಪಾವತಿ ಶಿಲ್ಕಿನ ಸಮಸ್ಯೆಯಿಂದ ನರಳುತ್ತಿರುವ ಭಾರತಕ್ಕೆ ಸಹಜವಾಗಿಯೇ ಆಸಕ್ತಿ ಉಂಟು ಮಾಡಿದೆ.

ಉತ್ಪಾದನೆಯ ಅಂಗಗಳಾದ ಸರಕು, ಸೇವೆ, ಶ್ರಮ ಮತ್ತು ಬಂಡವಾಳಗಳು ಒಂದೆಡೆಯಿಂದ ಇನ್ನೊಂದೆಡೆಗೆ ಸುಗಮವಾಗಿ ಚಲಿಸುವಂತೆ ಮಾಡಲು ಯೂರೋಪಿನ ಈ ಹನ್ನೆರಡು ದೇಶಗಳ ಮಾರುಕಟ್ಟೆಗಳನ್ನು ಒಗ್ಗೂಡಿಸುವ ಯೋಜನೆ ಸಿದ್ಧವಾಗಿದೆ. ೧೯೯೨ರ ಅಂತ್ಯದ ವೇಳೆಗೆ ಸ್ಥಾಪಿತವಾಗುವ ಈ ಮಾರುಕಟ್ಟೆಗೆ ಅಂತರರಾಷ್ಟ್ರೀಯ ವ್ಯಾಪಾರರಂಗದಲ್ಲಿ ತೀವ್ರ ಪ್ರತಿಕ್ರಿಯೆ ತೋರಿ ಬಂದಿದೆ. ಮಹತ್ತರವೆನಿಸಿರುವ ಈ ಪೂರ್ವಯೋಜಿತ ಬೆಳವಣಿಗೆ ಕೆಲವು ರಾಷ್ಟ್ರಗಳಿಗೆ ಆತಂಕ ತಂದಿದೆ. ಭಾರತದ ರಫ್ತು ಮಾರುಕಟ್ಟೆಯಲ್ಲೂ ಇದೇ ಆತಂಕ.

ಯೂರೋಪಿನ ದೇಶಗಳ ಈ ಯೋಜನೆ ಹೊಸದಾದರೂ ಮೂರು ದಶಕಗಳಿಗೂ ಹಿಂದೆ ೧೯೫೭ ರಲ್ಲಿ ಅವು ಮಾಡಿಕೊಂಡ ರೋಂ ಒಪ್ಪಂದದಲ್ಲಿಯೇ ಇದರ ಅಂಕುರವಾಯಿತೆನ್ನಬಹುದು. ಯೂರೋಪಿಯನ್ ಆರ್ಥಿಕ ಸಮುದಾಯದ ರಚನೆಯಾದದ್ದು ಆಗಲೇ. ಸಮುದಾಯದ ಮೂರು ದಶಕಗಳ ಅಸ್ತಿತ್ವ ವಿಫಲವಾಗಲಿಲ್ಲ. ಆರ್ಥಿಕ ಸಹಕಾರ ಮತ್ತು ಪರಸ್ಪರ ವ್ಯಾಪಾರದಲ್ಲಿ ಪ್ರಗತಿಗೆ ಇದು ನೆರವಾದುದಲ್ಲದೆ ಸಾಮಾನ್ಯ ಕೃಷಿ ನೀತಿಯೊಂದನ್ನು ರೂಪಿಸುವುದು ಆ ದೇಶಗಳಿಗೆ ಸಾಧ್ಯವಾದುದು ಮಹತ್ವದ ಸಂಗತಿ. ಸ್ಥಾಪನೆಯಾದ ಮೊದಲ ಹದಿನೈದು ವರ್ಷ ಸಮುದಾಯದ ಸ್ಥೂಲ ದೇಶೀಯ ಉತ್ಪನ್ನ (ಗ್ರಾಸ್ ಡೊಮೆಸ್ಟಿಕ್ ಪ್ರಾಡಕ್ಟ್) ಸಮಾಧಾನಕರವಾಗಿಯೇ ಇತ್ತು. ಆದರೂ ಕ್ರಮೇಣ ೧೯೮೦ ರಲ್ಲಿ ಇದು ಶೇ. ೫ ರಿಂದ ಶೇ. ೨ಕ್ಕೆ ಇಳಿದದ್ದು ಸದಸ್ಯ ರಾಷ್ಟ್ರಗಳಿಗೆ ಕಳವಳ ತಂದಿತು. ಉನ್ನತ ತಾಂತ್ರಿಕ ಕೈಗಾರಿಕಾ ಮಾರುಕಟ್ಟೆಯಲ್ಲಿ ಸಮುದಾಯದ ಪಾತ್ರ ಕಿರಿದಾಗತೊಡಗಿತಲ್ಲದೆ ಉದ್ಯೋಗಾವಕಾಶಗಳು ಕುಗ್ಗತೊಡಗಿದುವು. ಸಮುದಾಯಕ್ಕೆ ತಗಲಿದ ಈ ವ್ಯಾಧಿಯನ್ನು ಯೂರೋ ಸ್ಕ್ಲೆರೋಸಿಸ್ ಎಂದು ಬಣ್ಣಿಸಲಾಯಿತು. ಹೃದಯದಿಂದ ದೇಹದ ವಿವಿಧ ಭಾಗಗಳಿಗೆ ಶುದ್ಧ ರಕ್ತ ಒಯ್ಯುವ ಅಪಧಮನಿಗಳು ಪೆಡಸಾಗುವುದೇ ಸ್ಕ್ಲೆರೋಸಿಸ್ ವ್ಯಾಧಿಯ ಲಕ್ಷಣವಾಗದ್ದು ಸಮುದಾಯದ ದೇಶಗಳ ನಡುವೆ ಉತ್ಪಾದನೆಯ ಅಂಗಗಳಾದ ಸರಕು, ಬಂಡವಾಳ ಮುಂತಾದವು ಅಪೇಕ್ಷಿತವಾದಷ್ಟು ಸುಗಮವಾಗಿ ಸಾಗದಿರುವ ಸ್ಥಿತಿಯನ್ನು ಈ ವ್ಯಾಧಿಗೆ ಹೋಲಿಸಿರುವದು ಔಚಿತ್ಯಪೂರ್ಣ. ಈ ವ್ಯಾಧಿಯ ನಿವಾರಣೆಗೆ ಏಕ ಯೂರೋಪಿಯನ್ ಮಾರುಕಟ್ಟೆಯೇ ಪರಿಹಾರವೆಂದು ಸಮೂಹದ ಸದಸ್ಯ ರಾಷ್ಟ್ರಗಳು ನಿರ್ಧರಿಸಿ ೧೯೮೫ ರಲ್ಲಿ ಏಕ ಯೂರೋಪಿಯನ್ ಮಾರುಕಟ್ಟೆ ಅಧಿನಿಯಮವನ್ನು (ಸಿಂಗಲ್ ಯೂರೋಪಿಯನ್ ಮಾರ್ಕೆಟ್ ಆಕ್ಟ್) ಅಂಗೀಕರಿಸಿದುವು. ೧೯೮೭ ರಲ್ಲಿ ಇದು ಶ್ವೇತಪತ್ರವಾಗಿ ಸ್ವೀಕೃತವಾದುದರಿಂದ ಸದಸ್ಯ ದೇಶಗಳು ಕಾನೂನಿಕ ಸಮಾದೇಶಕ್ಕೆ ಬದ್ಧವಾದುದರ ಫಲವಾಗಿ ೧೯೯೨ರ ಅಂತ್ಯದ ವೇಳೆಗೆ ಏಕ ಯೂರೋಪಿಯನ್ ಮಾರುಕಟ್ಟೆಯ ಸ್ಥಾಪನೆ ಖಚಿತವಾಗಿದೆ.

ಯೂರೋಪಿನ ೧೨ ದೇಶಗಳ ಮಾರುಕಟ್ಟೆಗಳ ಏಕೀಕರಣಕ್ಕೂ ಭಾರತದ ರಫ್ತು ವ್ಯಾಪಾರಕ್ಕೂ ನಡುವಣ ಸಂಬಂಧವನ್ನು ಅರಿಯಲು ಸಮುದಾಯದೊಡನೆ ಭಾರತದ ಈವರೆಗಿನ ರಫ್ತು ಆಮದು ವ್ಯಾಪಾರವನ್ನು ನೋಡಬಹುದು. [ಕೋಷ್ಟಕ ೧]

ಭಾರತದ ಆಮದು ಅದರ ರಫ್ತಿಗಿಂತ ಯಾವಾಗಲೂ ಅಧಿಕವಾಗಿರುವುದೇ ಅಲ್ಲದೆ ಕ್ರಮೇಣ ಆಮದು ಮತ್ತು ರಫ್ತುಗಳ ನಡುವಣ ಅಂತರ ಹಿಗ್ಗುತ್ತಿದೆ. ಮೊದಲೇ ತಿಳಿಸಲಾಗಿರುವಂತೆ ಭಾರತದ ಒಟ್ಟು ವಿದೇಶೀ ವ್ಯವಹಾರದಲ್ಲಿ ಯೂರೋಪಿಯನ್

ಸಮುದಾಯದ ಇಇಸಿ ಪಾಲು ದೊಡ್ಡದು – ಶೇ. ೨೯. ಆದರೆ ಇಇಸಿಯ ವಿದೇಶ ವ್ಯವಹಾರದಲ್ಲಿ ಭಾರತದ ಪಾಲು ತೀರಾ ಸ್ವಲ್ಪ ಶೇ. ೧ಕ್ಕೂ ಕಡಿಮೆ. ಭಾರತಕ್ಕಿಂತ ಕಿರಿದಾದ ಇತರ ಹಲವು ಅಭಿವೃದ್ಧಿಶೀಲ ದೇಶಗಳ ಪಾಲಿಗಿಂತಲೂ ಇದು ಕಡಿಮೆ ಎಂಬುದು ನಿರಾಶೆಯ ಸಂಗತಿ. ಆದಾಗಿಯೂ ರಫ್ತು ವ್ಯಾಪಾರ ಗಣನೀಯವಾಗಿ ಏರುತ್ತಿರುವುದು ಈ ಕಾರ್ಮೋಡದ ಬೆಳ್ಳಿ ರೇಖೆ ಎಂಬುದನ್ನು ಯಾರೂ ಗುರುತಿಸಬಹುದು.

**ಕೋಷ್ಟಕ – ೧**

| ವರ್ಷ | ಭಾರತದಿಂದ ರಫ್ತು | ಭಾರತಕ್ಕೆ ಆಮದು (ಕೋಟಿ ರೂ.ಗಳಲ್ಲಿ) |
|---|---|---|
| ೧೯೭೦-೭೧ | ೨೮೨ | ೩೨೦ |
| ೧೯೮೦-೮೧ | ೧೪೪೭ | ೨೬೩೯ |
| ೧೯೮೪-೮೫ | ೨೦೦೨ | ೪೨೨೧ |
| ೧೯೮೮-೮೯ | ೪೯೪೬ | ೯೦೨೨ |

### ಸದವಕಾಶಗಳು

ಈ ದಶಕದ ಅತ್ಯಂತ ಮಹತ್ವದ ಆರ್ಥಿಕ ಘಟನೆಯೆಂದು ಮುಂಗಾಣಲಾಗಿರುವ ೧೯೯೨ರ ಏಕೀಕರಣ ಭಾರತಕ್ಕೆ ಎಂಥ ಫಲ ನೀಡೀತು? ಎಂಬುದು ಕುತೂಹಲದ ವಿಷಯ. ಆದರೂ ಈ ಬಗ್ಗೆ ಖಚಿತವಾಗಿ ಮುನ್ನುಡಿಯುವುದು ಸದ್ಯಕ್ಕಂತೂ ಕಷ್ಟ ಸಾಧ್ಯ. ಯೂರೋಪಿಯನ್ ಆರ್ಥಿಕ ಸಮುದಾಯ ಕುರಿತ ಭಾರತೀಯ ರಾಯಭಾರಿಗಳ ಸಮಿತಿ ಪ್ರಕಟಿಸಿರುವ ನೇರ ವರದಿ ಈ ಹಂತದಲ್ಲಿ ಒಂದು ದಿಕ್ಸೂಚಿಯಾಗಬಲ್ಲದು. ಏಕ ಯೂರೋಪಿಯನ್ ಮಾರುಕಟ್ಟೆ-೧೯೯೨ ಮತ್ತು ಭಾರತ ಎಂಬ ಶೀರ್ಷಿಕೆಯುಳ್ಳ ಈ ವರದಿಯು ಯೂರೋಪಿಯನ್ ಮಾರುಕಟ್ಟೆಯ ಏಕೀಕರಣದ ಪರಿಣಾಮ ಮತ್ತು ಭಾರತದ ರಫ್ತು ವ್ಯಾಪಾರದ ಅಭಿವೃದ್ಧಿ ಕುರಿತ ವಿಚಾರಗಳನ್ನು ಒಳಗೊಂಡಿದೆ. ಭಾರತದ ವ್ಯಾಪಾರವೃದ್ಧಿಗೆ ಏಕ ಯೂರೋಪಿಯನ್ ಮಾರುಕಟ್ಟೆ ವಿಶೇಷ ಅವಕಾಶಗಳನ್ನು ಒದಗಿಸುತ್ತದೆ ಎಂದು ಈ ವರದಿ ಸ್ಪಷ್ಟ ಮುನ್ಸೂಚನೆ ನೀಡಿದೆ.

ವರದಿಯನ್ನು ಅಧ್ಯಯನ ಮಾಡಿರುವ ತಜ್ಞರು ಕೆಲವು ಮುಖ್ಯ ಅಂಶಗಳನ್ನು ಗುರುತಿಸಿದ್ದಾರೆ.

೧. ಸಿದ್ಧ ಉಡುಪು, ಕೃಷಿ ಮತ್ತು ಸಾಗರೋತ್ಪನ್ನಗಳು, ಆಭರಣ ಮತ್ತು ಹರಳುಗಳು, ಜೆಮ್ಸ್, ಸಾಂಬಾರ ಪದಾರ್ಥಗಳು ಮುಂತಾದವು ಇಇಸಿಯೊಂದಿಗೆ ಭಾರತದ ಮುಕ್ಕಾಲು ರಫ್ತು ವ್ಯಾಪಾರದ ಸರಕುಗಳಾಗಿವೆ. ಯೂರೋಪಿಯನ್ ಸಮುದಾಯದ ನಿರೀಕ್ಷಿತ ಆರ್ಥಿಕ ಬೆಳವಣಿಗೆಯಿಂದ ಈ ವಸ್ತುಗಳಿಗೆ ಹೆಚ್ಚಿನ ಬೇಡಿಕೆಯುಂಟಾಗಿ ರಫ್ತು ಅಧಿಕಗೊಳ್ಳಬಹುದು.

ಮುಖ್ಯವಾಗಿ ಗ್ರೀಸ್, ಪೋರ್ಚುಗಲ್ ಮತ್ತು ಸ್ಪೇನ್ ದೇಶಗಳು ಹಿಂದುಳಿದವುಗಳೆಂದು ಗುರುತಿಸಲಾಗಿದ್ದು ಅಸಮತೋಲ ನಿವಾರಣೆಯ ದೃಷ್ಟಿಯಿಂದ ಈ ದೇಶಗಳ ಅರ್ಥವ್ಯವಸ್ಥೆಗಳಿಗೆ ಪುಷ್ಟಿ ನೀಡುವಂತೆ ಹೆಚ್ಚುವರಿ ಸಂರಚನಾತ್ಮಕ ನಿಧಿಗಳನ್ನು ಅಲ್ಲಿ ವಿನಿಯೋಜಿಸಲು ಉದ್ದೇಶಿಸಲಾಗಿರುವುದರಿಂದ ಈ ದೇಶಗಳಿಂದ ಬೇಡಿಕೆ ಹೆಚ್ಚುತ್ತದೆ.

೨ ಜವಳಿ ನಮ್ಮ ಪ್ರಮುಖ ರಫ್ತು ಸರಕು. ಈಗ ಯೂರೋಪಿಯನ್ ಸಮುದಾಯದ ದೇಶಗಳು ತಾವು ಮಾಡಿಕೊಂಡ ವಿವಿಧ ನೂಲು ಒಪ್ಪಂದದಂತೆ (ಮಲ್ಟಿ-ಫೈಬರ್ ಅಗ್ರಿಮೆಂಟ್) ಜವಳಿಯನ್ನು ಈಗ ಕೋಟಾದಲ್ಲಿ ಪಡೆಯುತ್ತಿವೆ. ಮಾರುಕಟ್ಟೆಯ ಏಕೀಕರಣದಿಂದ ಉಂಟಾಗುವ ಮುಕ್ತ ಪರಿಸ್ಥಿತಿಯಿಂದಾಗಿ ಜವಳಿ ರಫ್ತು ಹೆಚ್ಚುವುದು ಖಂಡಿತ. ಭಾರತದ ಜವಳಿ ಮತ್ತು ಸಿದ್ಧ ಉಡುಪು ರಫ್ತಿನಲ್ಲಿ ಇಇಸಿಗೆ ಮೂರನೇ ಒಂದು ಭಾಗ ಹೋಗುತ್ತದೆ ಎಂಬುದನ್ನು ನೆನಪಿನಲ್ಲಿಟ್ಟಾಗ ಈ ಸಂಗತಿಯ ಮಹತ್ವ ಅಧಿಕಗೊಳ್ಳುತ್ತದೆ.

೩ ಸಾಂಬಾರ ಪದಾರ್ಥಗಳು, ಕೃಷಿ ಮತ್ತು ಸಾಗರೋತ್ಪನ್ನಗಳ ತಾಂತ್ರಿಕ ಮತ್ತು ಇತರ ಮಾನಕಗಳನ್ನು (ಸ್ಟ್ಯಾಂಡರ್ಡ್ಸ್) ಸಾಮರಸ್ಯಗೊಳಿಸುವ ಯೋಜನೆ ಇರುವುದರಿಂದ ಭಾರತಕ್ಕೆ ಲಾಭ'ದ ಮೌಲ್ಯಸಂಚಯನದ ಅವಕಾಶ ದೊರೆಯುತ್ತದೆಂಬುದೇ ಈ ಲಾಭಕ್ಕೆ ಕಾರಣ.

೪ ಈಗಿನ ಸ್ಥಿತಿಯಲ್ಲಿ ಕಚ್ಚಾ ಸಾಮಗ್ರಿಯ ಸೀಮಿತ ಲಭ್ಯತೆ, ಉನ್ನತ ತಂತ್ರಜ್ಞಾನ ಬಳಸಿಕೊಳ್ಳುವ ಸಾಮರ್ಥ್ಯದ ಕೊರತೆ ಹಾಗೂ ಪರಿಸರ ಮತ್ತು ಜೀವನ ವಿಧಾನಗಳ ಕಾರಣದಿಂದ ಯೂರೋಪಿಯನ್ ಸಮುದಾಯದ ದೇಶಗಳು ಕೆಲವು ಕ್ಷೇತ್ರಗಳನ್ನು ಲಾಭಕಾರಿಯೆಂದು ಭಾವಿಸಿಲ್ಲದಿರಬಹುದು. ಏಕೀಕರಣದಿಂದ ಈ ಸ್ಥಿತಿ ಬದಲಾಗುತ್ತದೆ ಎನ್ನಲಾಗಿದೆ. ಗಣಕ ತಾಂತ್ರಿಕಾಂಶಗಳಿಗೆ (ಕಂಪ್ಯೂಟರ್ ಸಾಫ್ಟ್‌ವೇರ್ಸ್) ಬೇಡಿಕೆ ಹೆಚ್ಚಲಿದ್ದು ಹೆಚ್ಚಿನ ಸ್ಪರ್ಧೆಯಿರುವ ಈ ಕ್ಷೇತ್ರದಲ್ಲಿ ಭಾರತವೂ ಗಣನೀಯ ಕಾಣಿಕೆ ಸಲ್ಲಿಸಬಹುದೆಂದು ಭಾವಿಸಲಾಗಿದೆ.

### ಅಗತ್ಯವಾಗುವ ಸಿದ್ಧತೆ

ಇವಿಷ್ಟೂ ಅವಕಾಶಗಳ ವಿಷಯವಾಯಿತು. ಅವಕಾಶ ಕದ ತಟ್ಟಿದಾಗ ಅದನ್ನು ಸ್ವಾಗತಿಸಲು ಸಿದ್ಧತೆಯೂ ಅಗತ್ಯ. ಅತ್ಯಂತ ಮುಖ್ಯವಾದ ಸಿದ್ಧತೆಯೆಂದರೆ, ಇಇಸಿ ರಾಷ್ಟ್ರಗಳೊಂದಿಗಿನ ಭಾರತದ ಸಂಬಂಧ. ಯೂರೋಪಿಯನ್ ರಾಷ್ಟ್ರಗಳ ಮಾರುಕಟ್ಟೆಗಳು ಒಗ್ಗೂಡಿದಾಗ ಉಂಟಾಗುವ ಪರಿಸ್ಥಿತಿಯಲ್ಲಿ ರಫ್ತು ಕ್ಷೇತ್ರ ಮಾತ್ರವಲ್ಲದೆ ಉಳಿದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಭಾರತ ಹೇಗೆ ವರ್ತಿಸಬಹುದೆಂಬುದೂ ಮಹತ್ವದ ವಿಷಯವಾಗುತ್ತದೆ. ಈ ವಿಷಯದಲ್ಲಿ ಇದು ಹೀಗೇ ಎಂದು ಹೇಳಲಾಗುವುದಿಲ್ಲ. ಏಕೀಕರಣದ ಫಲವಾಗಿ ಅಲ್ಲಿ ಆಮದುದಾರರು ಒಗ್ಗೂಡಿದರೆ, ನಮ್ಮಲ್ಲಿಯ ರಫ್ತು ಘಟಕಗಳನ್ನು ಪುನರ್ರಚಿಸುವ, ಸಂಘಟಿಸುವ

ಅಗತ್ಯವಂತೂ ತೀವ್ರವಾಗುತ್ತದೆ. ಇಲ್ಲದಿದ್ದರೆ ಸ್ಪರ್ಧಾತ್ಮಕವಾಗಿರುವ ವಾತಾವರಣದಲ್ಲಿ ಲಾಭ ಮುಂದುವರೆಸಿಕೊಂಡು ಹೋಗುವ ಬಗೆಗೆ ವಿಶ್ವಾಸವಿರಿಸುವಂತಿಲ್ಲ. ಇಇಸಿಯಲ್ಲಿರುವ ಭಾರತೀಯ ಕಂಪನಿಗಳಿಗೂ ಈಗ ಸದವಕಾಶ. ಒಂದು ಸದಸ್ಯ ದೇಶದಲ್ಲಿರುವ ಯಾವುದೇ ಕಂಪನಿ ಇನ್ನೊಂದು ದೇಶದ ಸರಕಾರಿ ದರಖಾಸ್ತುಗಳನ್ನು (ಟೆಂಡರ್ಸ್) ಸವಾಲು (ಬಿಡ್) ಮಾಡಬಹುದು. ಆದ್ದರಿಂದ ಭಾರತೀಯ ಕಂಪನಿಗಳ ಶಾಖೆಗಳು ಅಥವಾ ಸಹವರ್ತಿಗಳು ಇಇಸಿ ದೇಶಗಳಲ್ಲಿದ್ದರೆ ಒಳ್ಳೆಯದು.

ಈ ನಿಟ್ಟಿನಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಅಧ್ಯಕ್ಷರು ಬ್ಯಾಂಕಿನ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಪ್ರಕಟಿಸಿರುವ ಒಂದು ಘೋಷಣೆ ಸ್ವಾಗತಾರ್ಹವಾದದ್ದು. ಯೂರೋಪಿಯನ್ ಮಾರುಕಟ್ಟೆಯ ಏಕೀಕರಣದ ಫಲ ಪಡೆಯುವ ದೃಷ್ಟಿಯಿಂದ ಇಇಸಿ ದೇಶಗಳೊಂದಿಗಿನ ವ್ಯವಹಾರಕ್ಕೇ ಮೀಸಲಾದ ಸಹಾಯಕ ಸಂಸ್ಥೆಯೊಂದನ್ನು ಬ್ಯಾಂಕ್ ಸ್ಥಾಪಿಸಲಿದೆ. ಈ ಸಂಸ್ಥೆಯ ರೂಪ ರೇಷೆಗಳು ಇನ್ನೂ ಪ್ರಕಟಗೊಂಡಿಲ್ಲವಾದರೂ ಸಮುದಾಯ ರಾಷ್ಟ್ರಗಳಲ್ಲಿ ಬ್ಯಾಂಕು ಕೆಲವು ಹೊಸ ಶಾಖೆಗಳನ್ನು ತೆರೆಯುವುದು, ಇಇಸಿ ದೇಶಗಳಿಗೆ ರಫ್ತು ಮಾಡುವ ಘಟಕಗಳಿಗೆ ವಿಶೇಷ ನೆರವು ನೀಡುವುದು, ಅಲ್ಲಿರುವ ಭಾರತೀಯ ಕಂಪನಿಗಳಿಗೆ ಅಗತ್ಯವಾದ ಹಣಕಾಸು ಮತ್ತಿತರ ಸೌಲಭ್ಯಗಳನ್ನು ನೀಡುವುದೇ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದೆಂದು ನಂಬಬಹುದು. ಭಾರತೀಯ ಸ್ಟೇಟ್ ಬ್ಯಾಂಕಿನ ಈ ಹೆಜ್ಜೆಯನ್ನು ಇತರ ಪ್ರಮುಖ ಬ್ಯಾಂಕುಗಳು, ಸಂಸ್ಥೆಗಳು ಅನುಕರಿಸಬಹುದು.

### ಸವಾಲುಗಳು

ಅವಕಾಶಗಳು ಮೊದಲು ಆಕರ್ಷಕವಾಗಿ ಕಂಡರೂ ಕ್ರಿಯೆಗೆ ತೊಡಗಿದಾಗ ಎದುರಾಗುವ ಸವಾಲುಗಳು ಹಲವು. ಯೂರೋಪಿಯನ್ ಆರ್ಥಿಕ ಸಮುದಾಯದ ಉದ್ಯಮಿಗಳು ವ್ಯವಹಾರ ಚತುರರೆಂದು ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪ್ರತೀತಿ. ಏಕೀಕರಣದ ಫಲವಾಗಿ ಅವರ ಚೌಕಾಶಿ ಸಾಮರ್ಥ್ಯ (ಬಾರ್ಗೇನಿಂಗ್ ಪವರ್) ಹೆಚ್ಚುವುದೆಂದು ಧಾರಾಳವಾಗಿ ನಂಬಬಹುದು. ಮುಖ್ಯವಾಗಿ ಉತ್ಪನ್ನಗಳ ಗುಣಮಟ್ಟವನ್ನು ಕಾಯ್ದಿರಿಸಿಕೊಳ್ಳುವ ಸಮಸ್ಯೆ ಎದುರಾಗುತ್ತದೆ. ಆಮದುದಾರರು ತಂತ್ರಜ್ಞಾನದ ನಿರಂತರ ನವೀಕರಣವನ್ನು ಒಂದು ನಿಬಂಧನೆಯಾಗಿ ಒಡ್ಡಿದರೂ ಹೆಚ್ಚಲ್ಲ.

ಸಮುದಾಯವು ಮಾರುಕಟ್ಟೆಯ ಏಕಸ್ವಾಮ್ಯ ಪಡೆಯುವ ಸಂಭವವಿರುವುದರಿಂದ ಉತ್ಪನ್ನದಲ್ಲಿ ದೋಷ, ಗುಣಮಟ್ಟದ ಕೊರತೆ ಕಂಡುಬಂದರೆ ದಂಡ ವಿಧಿಸುವ ಸಾಧ್ಯತೆ ಹೆಚ್ಚಾಗುತ್ತದೆ. ಈ ಎಲ್ಲ ಅಂಶಗಳೂ ಲಾಭವನ್ನು ಕಡಿಮೆಗೊಳಿಸುತ್ತದೆ ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಉತ್ಪಾದನೆ, ವಿತರಣೆ, ಉತ್ಪನ್ನದ ವಿನ್ಯಾಸ, ಪ್ಯಾಕೇಜಿಂಗ್, ಬೆಲೆ ನಿಗದಿ, ಮಾರಾಟ, ಸಕಾಲಕ್ಕೆ ಸರಕು ಬಟವಾಡೆ ಮುಂತಾದ ಅನೇಕ ಕ್ಷೇತ್ರಗಳಲ್ಲಿಯ ಕುಂದುಕೊರತೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೇರ್ಪಡಿಸುವ ಜಾಣ್ಮೆಯನ್ನು ನಮ್ಮ ರಫ್ತುದಾರರು ತೋರದಿದ್ದರೆ ಸಮುದಾಯದ ಏಕೀಕರಣ ತೋರುವ ಫಲ ಮೃಗಜಲ-ದಂತಾಗುವುದು ಖಚಿತ.

### ಸರ್ಕಾರದ ಪಾತ್ರ

ಇಂಥ ಸಂಗತಿಗಳಲ್ಲಿ ಸರಕಾರದ ಪಾತ್ರ ಅಧಿಕವಾಗಿರುವುದೆಂಬುದನ್ನು ನಿರೀಕ್ಷಿಸಬಹುದು. ಗುಣಮಟ್ಟದ ಉಸ್ತುವಾರಿ ನಿಯಂತ್ರಣಗಳಿಗಾಗಿ ವಿಶೇಷ ಪರೀಕ್ಷಾ ಕೇಂದ್ರಗಳನ್ನು ಸ್ಥಾಪಿಸಿ ಅವುಗಳ ವಿಶ್ವಾಸಾರ್ಹತೆಯನ್ನು ಸಮುದಾಯದ ರಾಷ್ಟ್ರಗಳಿಗೆ ಸಾಬೀತುಪಡಿಸಬೇಕಾದ್ದು ಸರಕಾರದ ಹೊಣೆಯಾಗುತ್ತದೆ. ಉನ್ನತ ತಂತ್ರಜ್ಞಾನದ ಕ್ಷೇತ್ರಗಳಲ್ಲಿಯ ಭಾರೀ ಉತ್ಪಾದಕರು ಇಇಸಿ ದೇಶಗಳಲ್ಲಿ ಶಾಖೆಗಳನ್ನು ತೆರೆಯಲು ಪ್ರೋತ್ಸಾಹ ನೀಡಬೇಕಾಗುತ್ತದೆ.

ರಫ್ತು ಹೆಚ್ಚಾಗುವಂತೆ ಉತ್ಪಾದನೆಯನ್ನು ಅಧಿಕಗೊಳಿಸುವ ದೃಷ್ಟಿಯಿಂದ ವಿದೇಶೀ ಬಂಡವಾಳ ಮತ್ತು ತಂತ್ರಜ್ಞಾನವನ್ನು ಆಕರ್ಷಿಸಲು ಸರಕಾರವೇ ಮುಂದಾಗಬೇಕು. ಉತ್ಪನ್ನಗಳ ಶೀಘ್ರ ಮಾರಾಟಕ್ಕಾಗಿ ಈ ದೇಶಗಳಲ್ಲಿ ವಿಶೇಷ ದಾಸ್ತಾನು ಮಳಿಗೆಗಳನ್ನು ಸ್ಥಾಪಿಸಬೇಕಾಗುತ್ತದೆ. ಆಮದುದಾರ-ರಫ್ತುದಾರರ ನಡುವೆ ಸಮರ್ಪಕ ರೀತಿಯಲ್ಲಿ ಸಂವಹನ ಏರ್ಪಡುವಂತೆ ವ್ಯವಸ್ಥೆಯಾಗಬೇಕು. ಮಾಧ್ಯಮಗಳ ಮೂಲಕ ಭಾರತೀಯ ಉತ್ಪನ್ನಗಳ, ಭಾರತೀಯ ತಂತ್ರಜ್ಞಾನದ ಪರಿಚಯ ಮಾಡಿಕೊಡಲು ಅನುವಾಗುವಂಥ ವಿಶೇಷ ಉತ್ಸವಗಳಲ್ಲಿ ನಮ್ಮ ರಫ್ತುದಾರರು ಹೆಚ್ಚು ಹೆಚ್ಚಾಗಿ ಭಾಗವಹಿಸುವಂತೆ ಮಾಡುವುದಲ್ಲದೆ ನಮ್ಮ ಸರಕಾರವೇ ಅಂಥ ಉತ್ಸವಗಳನ್ನು ಏರ್ಪಡಿಸುವುದಕ್ಕೆ ಮುಂದಾಗಬೇಕು

ಒಟ್ಟಾರೆ, ಏಕೀಕೃತ ಯೂರೋಪಿಯನ್ ಮಾರುಕಟ್ಟೆಯ ಲಾಭ ಪಡೆಯುವಲ್ಲಿ ರಫ್ತುದಾರನ ರಫ್ತು ಸಾಮರ್ಥ್ಯವೇ ಅತಿ ಮುಖ್ಯ ಪಾತ್ರ ವಹಿಸುತ್ತದೆ. ಸರಕಾರ ಈ ಸಾಮರ್ಥ್ಯದ ಪೋಷಣೆಗೆ ಮುಂದಾಗುವುದು ಅಗತ್ಯವಾಗುತ್ತದೆ.

ಸಮುದಾಯದ ಸದಸ್ಯ ದೇಶಗಳು ವಿಭಿನ್ನ ಭಾಷೆಗಳನ್ನು, ವಿಭಿನ್ನ ಸಂಸ್ಕೃತಿಗಳನ್ನು, ವಿಭಿನ್ನ ತೆರಿಗೆ ನಿಯಮ ನಿಯಂತ್ರಣಗಳನ್ನು ಹೊಂದಿವೆ. ಇತಿಹಾಸದಲ್ಲಿ ಘಟಿಸಿದ ಪರಸ್ಪರ ವೈಷಮ್ಯಗಳನ್ನು ಮರೆತು ಅವು ಆರ್ಥಿಕ ಅಭಿವೃದ್ಧಿಗಾಗಿ ಕೈಕೈ ಕೂಡಿಸಿವೆ. ಅನುಕರಣೀಯವಾದ ಈ ಕಾರ್ಯದಿಂದ ಭಾರತವೂ ಸೇರಿದಂತೆ ವಿಶ್ವದ ಇತರ ರಾಷ್ಟ್ರಗಳು ಏನಾದರೂ ಪಾಠ ಕಲಿಯಬಹುದೇ ಎಂದು ಜಿಜ್ಞಾಸುಗಳು ತಲೆ ಕೆರೆದುಕೊಳ್ಳುತ್ತಿದ್ದಾರೆ. ಸಾರ್ಕ್ ದೇಶಗಳ ಮಾರುಕಟ್ಟೆಗಳ ಹೊಂದಾಣಿಕೆಯಿಂದ ಭಾರತದ ರಫ್ತು ವ್ಯಾಪಾರ ಹೆಚ್ಚಲಿ ಎಂಬುದು ದೂರದ ಆಸೆ. ●

*ಬ್ಯಾಂಕಿಂಗ್ ಪ್ರಪಂಚ, ಜೂನ್ ೧೯೯೦*

# ಭಾರತದ ತಂತ್ರಜ್ಞಾನ ಅಭಿವೃದ್ಧಿ ಮತ್ತು ಮಾಹಿತಿ ಕಂಪನಿ

ಟಿ. ಕೆ. ರಂಗನಾಥ

ವಿಶ್ವದ ಕೈಗಾರಿಕಾ ರಾಷ್ಟ್ರಗಳೊಂದಿಗೆ ಯಶಸ್ವಿಯಾಗಿ ಸ್ಪರ್ಧಿಸಲು ಸಾಧ್ಯವಾಗುವಂತೆ, ಭಾರತದ ತಂತ್ರಜ್ಞರು ಪ್ರಯೋಗ ಶಾಲೆಯಲ್ಲಿ ಅಣಿಗೊಳಿಸಿದ ನವೀನ ತಂತ್ರಜ್ಞಾನವನ್ನು ವಾಣಿಜ್ಯೀಕರಣಗೊಳಿಸಿ ಅದು ಲಾಭಪ್ರದವಾಗಿ ದುಡಿಯುವಂತೆ ಮಾಡಲು ಸ್ಥಾಪಿತವಾದ ನೂತನ ಸಂಸ್ಥೆಯೊಂದರ ಉದ್ದೇಶ, ಕಾರ್ಯವಿಧಾನ ಮತ್ತು ಸಾಧನೆ ಸೋಲುಗಳ ವಿವೇಚನೆ.

**ಹಿನ್ನೆಲೆ**

ಭಾರತ ಹಿಂದುಳಿದ ದೇಶವಾದರೂ ಮುಂದುವರಿದ ದೇಶಗಳಿಗೆ ಬೇಕಾದ ಶಿಕ್ಷಿತ ತಾಂತ್ರಿಕ ಮಾನವ ಸಂಪನ್ಮೂಲ ಒದಗಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಸಾಕಷ್ಟು ಒತ್ತಾಸೆ ಸಿಗದ ಭಾರತದ ತಂತ್ರಜ್ಞರು ಇತರ ದೇಶಗಳಿಗೆ ವಲಸೆ ಹೋಗಿ (ಪ್ರತಿಭಾ ಪಲಾಯನ) ತಮ್ಮದೇ ಆದ ಕೈಗಾರಿಕಾ ಘಟಕಗಳನ್ನು ಸ್ಥಾಪಿಸಿ ವಿಶ್ವ ಮಾನ್ಯತೆ ಗಳಿಸಿರುವ ವಿಚಾರ ಆಗಿಂದಾಗ್ಗೆ ಪತ್ರಿಕೆಗಳಲ್ಲಿ ಪ್ರಚುರಪಡಿಸಲ್ಪಡುತ್ತಿದೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಖ್ಯಾತ ತಂತ್ರಜ್ಞರಿಗೆ ಅದುವರೆಗೆ ವಾಣಿಜ್ಯೀಕರಣಗೊಳ್ಳದ ಅವರ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಧನ ಸಹಾಯ ನೀಡುವ ಸಂಘಟನೆಗಳು ಹಲವಿವೆ. ಅಂತಹ ಯೋಜನೆಗಳಲ್ಲಿ ನಷ್ಟ ಸಂಭಾವ್ಯತೆ ಹೆಚ್ಚಿರುವುದಾದರೂ ಯೋಜನೆ ಯಶಸ್ವಿಯಾದಲ್ಲಿ ತೊಡಗಿಸಿದ ಹಣದ ಹಲವು ಪಟ್ಟು ಲಾಭ ಕೆಲವೇ ವರ್ಷಗಳಲ್ಲಿ ದೊರಕುವುದು ಅಪರೂಪವೇನೂ ಅಲ್ಲ. ಇತ್ತೀಚಿನ ದಿನಗಳಲ್ಲಿ ಕೈಗಾರಿಕಾ ಅಭಿವೃದ್ಧಿಯಿಂದ ಭಾರತ ಕೈಗಾರಿಕಾ ಉತ್ಪನ್ನದಲ್ಲಿ ವಿಶ್ವದಲ್ಲಿ ೧೦ನೆಯ ಸ್ಥಾನ ಪಡೆದಿದೆ. ನಮ್ಮ ಕೈಗಾರಿಕಾ ಉತ್ಪನ್ನಗಳನ್ನು ಹೆಚ್ಚಿಸುವುದು ಹಾಗೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೆಲೆ ಹಾಗೂ ಗುಣಮಟ್ಟದ ವಿಚಾರದಲ್ಲಿ ಅವುಗಳನ್ನು ಸ್ಪರ್ಧಾತ್ಮಕವನ್ನಾಗಿ ಮಾಡುವುದು ಇಂದಿನ ಅಗತ್ಯವಾಗಿದೆ. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಇತ್ತೀಚಿನ ತಂತ್ರಜ್ಞಾನದ ಬಳಕೆಯಿಂದಾಗಿ ಸ್ಪರ್ಧೆಯ ತೀವ್ರತೆ ಗಣನೀಯವಾಗಿ ಹೆಚ್ಚಿದೆ. ಹಿಂದಿನಂತೆ ತಂತ್ರಜ್ಞಾನವನ್ನು ಆಮದು ಮಾಡಿಕೊಳ್ಳುವ ಪ್ರವೃತ್ತಿಗೆ ಕಡಿವಾಣ ಹಾಕಿ ಹೊರಹೋಗುವ ವಿದೇಶಿ ವಿನಿಮಯವನ್ನು ತಡೆಹಿಡಿಯುವುದರ ಜೊತೆಗೆ ನಮ್ಮದೇ ತಂತ್ರಜ್ಞಾನವನ್ನು ಅಭಿವೃದ್ಧಿಗೊಳಿಸಿ ಅದರಿಂದ ಉತ್ಪಾದಿತ ವಸ್ತುಗಳನ್ನು ರಫ್ತು ಮಾಡಿ ವಿದೇಶಿ ವಿನಿಮಯ ಗಳಿಸುವುದರತ್ತ ಈಗ ಗಮನ ಹರಿದಿದೆ. ಹಾಗಾಗಿ ಭಾರತದ ತಂತ್ರಜ್ಞರು ತಮ್ಮ ಪ್ರಯೋಗ ಶಾಲೆಗಳಲ್ಲಿ ಬಳಸಿರುವ ತಂತ್ರಜ್ಞಾನವನ್ನು ವಾಣಿಜ್ಯೀಕರಣಗೊಳಿಸುವ ಅವಶ್ಯಕತೆ ಇಂದು ಆದ್ಯತೆ ಪಡೆದಿದೆ. ಹೊಸ ತಂತ್ರಜ್ಞಾನವನ್ನು ಉಪಜ್ಞೆಗೊಳಿಸುವ ಹಾಗೂ ವಾಣಿಜ್ಯೀಕರಣಗೊಳಿಸುವ ಎರಡೂ ಅಗತ್ಯಗಳನ್ನು ಪೂರೈಸಲು ಭಾತಂಮಾಕಂಪ (ಭಾರತದ ತಂತ್ರಜ್ಞಾನ ಅಭಿವೃದ್ಧಿ ಮತ್ತು ಮಾಹಿತಿ ಕಂಪನಿ ಪರಿಮಿತ) ಜನ್ಮ ತಾಳಿದೆ.

**ಪ್ರವೇಶ**

ಭಾರತದ ಉದರಿ ಮತ್ತು ವಿನಿಯೋಜನೆ ನಿಗಮ ಹಾಗೂ ಭಾರತದ ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಜಂಟಿಯಾಗಿ ಪ್ರವರ್ತಿಸಿರುವ ಭಾತಂಮಾಕಂಪ ಜನವರಿ ೫, ೧೯೮೮ ರಂದು ಒಂದು ನಿಗಮಿತ ಕಂಪನಿಯಾಗಿ ನೋಂದಾಯಿಸಲ್ಪಟ್ಟಿತ್ತು. ಭಾರತದ ಉದರಿ ಮತ್ತು ವಿನಿಯೋಜನ ನಿಗಮದ ಉಪಕ್ರಮ ಬಂಡವಾಳ ಹಣಕಾಸು ವಿಭಾಗ ಹಾಗೂ ಇಂಡೋ ಅಮೆರಿಕನ್ ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಕ್ರಮದ ವಾಣಿಜ್ಯಕ ತಂತ್ರಜ್ಞಾನದ ಅನ್ವಯುಕ್ಕಾಗಿ ಕಾರ್ಯಕ್ರಮ ಜಂಟಿಯಾಗಿ ಈ ಕಂಪನಿಯ ರೂಪುರೇಷೆಗಳನ್ನು ಸಿದ್ಧಪಡಿಸಿದವು. ಈ ಕಂಪನಿಯ ಪಾವತಿಯಾದ ಸಾಮ್ಯ ಬಂಡವಾಳ ರೂ. ೧ ಕೋಟಿ ಇದ್ದು, ಐಸಿಐಸಿಐ ಮತ್ತು ಯುಟಿಐ ಸಮಪಾಲು ನೀಡಿವೆ. ಭಾತಂಮಾಕಂಪದ ಕೇಂದ್ರ ಕಛೇರಿ ಬೆಂಗಳೂರಿನಲ್ಲಿದೆ. ಕಂಪನಿಯ ಆಡಳಿತವನ್ನು ಖ್ಯಾತ ಕೈಗಾರಿಕೋದ್ಯಮಿಗಳು, ತಂತ್ರಜ್ಞರು, ಸರ್ಕಾರಿ ಅಧಿಕಾರಿಗಳನ್ನೊಳಗೊಂಡ ನಿರ್ದೇಶಕ ಮಂಡಳಿ ನಡೆಸುತ್ತದೆ.

**ಉದ್ದೇಶ ಹಾಗೂ ಚಟುವಟಿಕೆಗಳು**

ಭಾತಂಮಾಕಂಪಬಂಡವಾಳ ಹಾಗೂ ಹಣಕಾಸು ಮತ್ತು ಇತರ ಬೆಂಬಲ ಸೇವೆಗಳನ್ನು ಒದಗಿಸುವುದರ ಮೂಲಕ

ರಾಷ್ಟ್ರದಲ್ಲಿ ತಂತ್ರಜ್ಞಾನ ಅಭಿವೃದ್ಧಿ ಪ್ರಕ್ರಿಯೆಯ ವೇಗವರ್ಧನೆ ಮಾಡುವುದು ಎಂದು ಘೋಷಿಸಿದೆ. ಈ ಉದ್ದೇಶದ ಈಡೇರಿಕೆಗಾಗಿ ಕೆಳಕಂಡ ಚಟುವಟಿಕೆಗಳನ್ನು ಭಾತಂಮಾಕಂಪ ಕೈಗೆತ್ತಿಕೊಂಡಿದೆ.

೧ ಪ್ರಮುಖವಾಗಿ ಸಾಹಸ ಬಂಡವಾಳ ನೀಡಿಕೆ ಮೂಲಕ ವಾಣಿಜ್ಯ ಮತ್ತು ಮಾರುಕಟ್ಟೆ ಅನುಸ್ಥಾಪಿತ ತಂತ್ರಜ್ಞಾನ ಸಾಹಸೋದ್ಯಮಗಳಿಗೆ ಧನಸಹಾಯ ನೀಡಿಕೆ.
೨ ಉದ್ಯಮಶೀಲ ಗ್ರಾಹಕನಿಗೆ ತಂತ್ರಜ್ಞಾನ ಸಂಬಂಧಿತ ಕ್ಷೇತ್ರಗಳಲ್ಲಿ ಹಾಗೂ ಉದ್ಯಮ ವ್ಯವಸ್ಥಾಪನ ಕ್ಷೇತ್ರದಲ್ಲಿ ತನ್ನ ನೈಪುಣ್ಯ ಉತ್ತಮಗೊಳಿಸಲು ತಾಂತ್ರಿಕ ವ್ಯವಸ್ಥಾಪನ ಬೆಂಬಲ.
೩ ವಿವಿಧ ಸಂಸ್ಥೆಗಳ ನಡುವೆ ಪರಿಣಾಮಕಾರಿ ಅಭಿಮುಖಿ ವ್ಯವಸ್ಥೆಯೊಂದರ ಅಭಿವೃದ್ಧಿ.
೪ ಮಾಹಿತಿ ಮೌಲ್ಯವರ್ಧನೆಗಾಗಿ ಪರಿಣಿತರ ತಂತ್ರಜ್ಞಾನ ಸಲಹಾ ಸೇವೆಯೊಂದನ್ನು ರೂಪಿಸುವ ಉದ್ದೇಶದಿಂದ ತಂತ್ರಜ್ಞಾನಸಂಬಂಧಿ ಹಾಗೂ ಮಾರುಕಟ್ಟೆ ಸಂಬಂಧಿ ಮಾಹಿತಿ ನೀಡುವ ಸೇವಾ ವ್ಯವಸ್ಥೆಯೊಂದರ ಸ್ಥಾಪನೆ.

ತಂತ್ರಜ್ಞಾನ ಸಾಹಸೋದ್ಯಮಿಗಳಿಗೆ ನೆರವುನೀಡಲು ಸಾಹಸೋದ್ಯಮ ನಿಧಿಗಳನ್ನು ಭಾತಂಮಾಕಂಪ ಸ್ಥಾಪಿಸಿದೆ. ಭಾರತದ ಮೊಟ್ಟಮೊದಲ ಸಾಹಸೋದ್ಯಮ ನಿಧಿ ರೂ. ೨೦ ಕೋಟಿ ಆಗಿದ್ದು ಇದಕ್ಕೆ ಐಸಿಐಸಿಐ ಮತ್ತು ಯುಟಿಐ ತಲಾ ಹತ್ತು ಕೋಟಿ ರೂ. ನೀಡಿವೆ. ಸಾಹಸ ಬಂಡವಾಳ ಯೂನಿಟ್ ಯೋಜನೆ ಎಂದು ಹೆಸರಿಸಲಾದ ಈ ಯೋಜನೆಯಡಿಯಲ್ಲಿ ೬೯ ಪರಿಯೋಜನೆಗಳಿಗೆ ಧನ ಸಹಾಯ ನೀಡಲಾಗಿದೆ. ಈ ಸಾಹಸೋದ್ಯಮ ನಿಧಿಯ ವ್ಯವಸ್ಥಾಪನದ ಜವಾಬ್ದಾರಿ ಭಾತಂಮಾಕಂಪದ್ದು. ಈ ನಿಧಿಯಿಂದ ಧನಸಹಾಯ ಪಡೆದ ಪರಿಯೋಜನೆಗಳು ವಾಣಿಜ್ಯಕ ಉತ್ಪನ್ನಗಳು ಮಾರುಕಟ್ಟೆ ಪ್ರವೇಶಿಸಲು ಸುಮಾರು ೨ ವರ್ಷಗಳಷ್ಟು ಕಾಲ ಬೇಕಾಗುತ್ತದೆ. ಈ ಮೊದಲ ನಿಧಿಯು ಸಂಪೂರ್ಣವಾಗಿ ಬಳಕೆಯಾಗಿದ್ದ ರೂ. ೧೦೦ ಕೋಟಿಯ ಎರಡನೆ ನಿಧಿಯ ಸಂಯೋಜನೆ ನಡೆಯುತ್ತಿದೆ. ಈ ಎರಡನೆ ನಿಧಿಗೆ ಐಸಿಐಸಿಐ ಮತ್ತು ಯುಟಿಐ ಜೊತೆಗೆ ಹಲವಾರು ಬ್ಯಾಂಕುಗಳೂ ಇತರ ಕಂಪನಿಗಳೂ ಸೇರಿದಂತೆ ೨೫೦ ವಿನಿಯೋಜಕರು ವಂತಿಗೆ ನೀಡುವ ಅಂದಾಜಿದೆ.

### ನೆರವಿಗೆ ಅರ್ಹತೆ

ಸಾಹಸೋದ್ಯಮ ನಿಧಿಯ ಹಣಕಾಸು ಸಹಾಯ ಹೊಸ ತಂತ್ರಜ್ಞಾನದ ಬಳಕೆ ಅಥವಾ ನವೋನ್ಮೇಷ ಉತ್ಪನ್ನಗಳ ತಯಾರಿಕೆಗೆ ಮಾತ್ರ ಮೀಸಲಾಗಿದೆ. ಇಂತಹ ಉದ್ಯಮಗಳಲ್ಲಿ ನಷ್ಟ ಸಂಭಾವ್ಯತೆ ಹೆಚ್ಚಿರುವುದರಿಂದ ಸಾಂಪ್ರದಾಯಿಕ ಮೂಲಗಳಿಂದ ಸಾಮಾನ್ಯ ರೀತಿಯಲ್ಲಿ ಧನಸಹಾಯ ದೊರೆಯುವುದು ಕಷ್ಟಸಾಧ್ಯ. ತಂತ್ರಜ್ಞಾನ ಸಾಹಸೋದ್ಯಮ ಹಣಕಾಸು ಸಹಾಯ ಭಾರತದಲ್ಲಿ ಅಭಿವೃದ್ಧಿಗೊಳಿಸಿದ ತಂತ್ರಜ್ಞಾನವನ್ನು ಅನ್ವಯಗೊಳಿಸುವುದಕ್ಕೆ ಅಥವಾ ವಾಣಿಜ್ಯಕ ಮಟ್ಟದಲ್ಲಿ ನವೋನ್ಮೇಷ ಸೇವೆಯೊಂದನ್ನು ಒದಗಿಸುವ ಯೋಜನೆಗೂ ದೊರಕುತ್ತದೆ. ಈ ಯೋಜನೆಯಡಿ ಧನಸಹಾಯ ಪಡೆಯಲು ಉತ್ಪನ್ನ ಅಥವಾ ಸೇವೆ ಪ್ರಸ್ತುತ ದೊರೆಯುವ ಉತ್ಪನ್ನ ಅಥವಾ ಸೇವೆಗೆ ಹೋಲಿಸಿದರೆ ಗಮನಾರ್ಹ ಉತ್ತಮಿಕೆ ಹೊಂದಿರಬೇಕು. ಹಾಗೂ ಪರಿಯೋಜನೆಯಿಂದ ದೊರಕುವ ಲಾಭ ನಷ್ಟ ಸಂಭಾವ್ಯತೆಗೆ ಹೋಲಿಸಿದರೆ ಹೆಚ್ಚಿನದಿರಬೇಕು. ಪರಿಯೋಜನೆಗೆ ತೊಡಗಿಸುವ ಮೂಲ ವಿನಿಯೋಜನೆ ಸಾಮಾನ್ಯವಾಗಿ ರೂ. ೨ ಕೋಟಿಗೆ ಮೀರಬಾರದು.

### ನೆರವಿನ ಸ್ವರೂಪ

ಭಾತಂಮಾಕಂಪ ನೀಡುವ ಧನಸಹಾಯ ಹಲವು ತರದಲ್ಲಿದೆ. ಅವುಗಳಲ್ಲಿ ಮುಖ್ಯವಾದವು-

೧ **ಕಂಪನಿಯ ಸಾಮ್ಯ ಷೇರುಗಳಲ್ಲಿ ಹಣ ತೊಡಗಿಸುವುದು.** ಸಾಹಸೋದ್ಯಮ ಯಶಸ್ವಿಯಾಗಿ ಕಾರ್ಯ ನಿರ್ವಹಿಸುವಂತಾದಾಗ ಅಥವಾ ಬಂಡವಾಳ ವಿನಿಯೋಜನೆಯ ಯುಕ್ತ ಸಮಯದ ಅನಂತರ ಭಾತಂಮಾಕಂಪ ತಾನು ಹೊಂದಿದ ಷೇರುಗಳನ್ನು ಮಾರುತ್ತದೆ. ಆದರೆ ಅದನ್ನು ಕೊಳ್ಳುವ ಮೊದಲ ಅವಕಾಶವನ್ನು ಪ್ರವರ್ತಕರಿಗೆ ನೀಡುತ್ತದೆ. ಅದು ಮಾರುವ ಬೆಲೆ ಅಂದಿನ ಮಾರುಕಟ್ಟೆ ಬೆಲೆಗೆ ಸಮೀಪವಾಗಿರುತ್ತದೆ.
೨. **ಷರತ್ತಿನ ಸಾಲ:** ಈ ಸಾಲದ ಮೇಲೆ ಇತರ ಸಾಲಗಳಂತೆ ಬಡ್ಡಿ ವಿಧಿಸಲಾಗುವುದಿಲ್ಲ. ಅದಕ್ಕೆ ಬದಲಾಗಿ ವಾಣಿಜ್ಯಕ ಉತ್ಪಾದನೆ ಪ್ರಾರಂಭವಾದ ಮೇಲೆ ವಹಿವಾಟು ಆಧರಿಸಿ ಶುಲ್ಕ ವಿಧಿಸಲಾಗುತ್ತದೆ. ಹಾಗಾಗಿ ಸಾಲದ ಮೇಲೆ ನೀಡಬೇಕಾದ ಶುಲ್ಕ ಪರಿಯೋಜನೆ ವಾಣಿಜ್ಯಕವಾಗಿ ಸಂಪೂರ್ಣವಾದಂದಿನಿಂದ ಮಾತ್ರ ನೀಡಬೇಕಾಗಿದ್ದು ಪರಿಯೋಜನೆಯ ಯಶಸ್ಸಿನ ಮೇಲೆ ಅವಲಂಬಿತ-ವಾಗಿರುತ್ತದೆ.

ಪ್ರತಿ ಪರಿಯೋಜನೆಗೆ ಹಣಕಾಸು ನೀಡಿಕೆಯ ಸ್ವರೂಪವನ್ನು, ಕಂಪೆನಿ ಹೊಸದೇ? ಹಳೆಯದೇ? ಪ್ರವರ್ತಕರ ಪಾಲು ಎಷ್ಟು? ಪರಿಯೋಜನೆಯ ಋಣ-ಬಂಡವಾಳ ಅನುಪಾತ, ಪರಿಯೋಜನೆಯ ಸ್ವರೂಪ, ವ್ಯವಹಾರ ಮತ್ತು ಲಾಭ-ಭವಸಾಮರ್ಥ್ಯ ಮುಂತಾದ ಹಲವು ಪ್ರಾಚಲಗಳನ್ನು ಪರಿಗಣನೆಗೆ ತೆಗೆದುಕೊಂಡು ನಿರ್ಧರಿಸಲಾಗುತ್ತದೆ. ತನ್ನ ಮೊದಲ ನಿಧಿಯಲ್ಲಿ ಶೇ. ೭೪ ರಷ್ಟನ್ನು ಷರತ್ತಿನ ಸಾಲವಾಗಿಯೂ ಶೇ. ೧೯ ರಷ್ಟನ್ನು ಸಾಮ್ಯ ಷೇರುಗಳಾಗಿಯೂ ಉಳಿದ ಶೇ. ೭ ರಷ್ಟನ್ನು ಸಾಲದ ರೂಪದಲ್ಲಿಯೂ ವಿತರಿಸಲಾಗಿದೆ.

ಸ್ಥೂಲವಾಗಿ ಹೇಳುವುದಾದರೆ, ಭಾತಂಮಾಕಂಪ ಉದ್ಯಮವೊಂದರಲ್ಲಿ ಸಾಲಿಗನಪಾತ್ರ ವಹಿಸದೆ, ಭಾಗೀದಾರನ ಪಾತ್ರ ವಹಿಸುತ್ತದೆ. ಅಂದರೆ ಲಾಭ ನಷ್ಟಗಳಲ್ಲಿ ಪಾಲು

ಪಡೆಯುತ್ತದೆ. ಪರಿಯೋಜನೆಯನ್ನು ಯಶಸ್ವಿಯಾಗಿ ಜಾರಿಗೊಳಿಸಲು ವ್ಯವಸ್ಥಾಪನ ನೆರವನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನೀಡುತ್ತದೆ. ಈವರೆಗೆ ಭಾತಂಮಾಕಂಪ ಈ ಮುಂದಿನ ಕ್ಷೇತ್ರದ ಉದ್ಯಮಗಳಿಗೆ ನೆರವು ನೀಡಿದೆ.

೧ ಗಣಕ ಯಂತ್ರ, ಯಾಂತ್ರಿಕಾಂಶ ಹಾಗೂ ತಾಂತ್ರಿಕಾಂಶ

೨ ವಿದ್ಯನ್ಮಾನ

೩ ದೂರಸಂಪರ್ಕ

೪ ವಿದ್ಯುತ್

೫ ಸಾಂಪ್ರದಾಯಕವಲ್ಲದ, ನವೀಕರಿಸಬಹುದಾದ ಇಂಧನಗಳು

೬ ಪರಿಸರ ಇಂಜನಿಯರಿಂಗ್ ಮಾಲಿನ್ಯ ನಿಯಂತ್ರಣ

೭ ರಾಸಾಯನಿಕಗಳು, ಪಾಲಿಮರ್ಸ್

೮ ವಿಶಿಷ್ಟ ಪದಾರ್ಥಗಳು

೯ ರೋಗ ನಿದಾನ ಹಾಗೂ ಲಸಿಕೆಗಳು

೧೦ ಔಷಧ

೧೧ ಆಹಾರ, ಸಿದ್ಧಪಡಿಸಿದ ಆಹಾರ ಸಂಬಂಧಿ ತಂತ್ರಜ್ಞಾನ

೧೧ ಹೊಸ ಬಗೆಯ ಸೇವೆಗಳು

೧೨ ಯಾಂತ್ರಿಕ ಉಪಕರಣಗಳು

೧೩ ಜೈವಿಕ ತಂತ್ರಜ್ಞಾನ

**ತಂತ್ರಜ್ಞಾನ ಮಾಹಿತಿ ಸೇವೆ (ತಂಮಾಸೇ)**

ವ್ಯವಹಾರಸ್ಥರು, ಯೋಜಕರು, ವಿತ್ತ ವಿಶ್ಲೇಷಕರು, ಸಂಶೋಧಕರು, ಮತ್ತು ತಂತ್ರಜ್ಞರಿಗೆ ಬೇಕಾದ ವ್ಯಾಪಕ ಹಾಗೂ ನಿರ್ದಿಷ್ಟ ಮಾಹಿತಿಯನ್ನು ಶೀಘ್ರವಾಗಿ ಒದಗಿಸುವುದರ ಮೂಲಕ ಸ್ಪರ್ಧಾತ್ಮಕ ಅನುಕೂಲವನ್ನು ನೀಡುವುದಕ್ಕಾಗಿ ತಂತ್ರಜ್ಞಾನ ಮಾಹಿತಿ ಸೇವೆ ವಿಭಾಗವನ್ನು ಆಗಸ್ಟ್ ೧೯೫೯ ರಲ್ಲಿ ಪ್ರಾರಂಭಿಸಲಾಗಿದೆ. ಸುಮಾರು ೩೦ ರಿಂದ ೪೦ ಪ್ರಮುಖ ತಂತ್ರಜ್ಞಾನ/ವಿಜ್ಞಾನಕ್ಕೆ ಸಂಬಂಧಿಸಿದ ದೈನಂದಿನ ಬೆಳವಣಿಗೆ ಒಳಗೊಂಡ ಮಾಹಿತಿಯನ್ನು ದೊರಕಿಸುವ ಕೇಂದ್ರಗಳೊಡನೆ ಸಂಪರ್ಕ ಹೊಂದಿದೆ. ಅಮೆರಿಕ ಸಂಯುಕ್ತ ಸಂಸ್ಥಾನದ ರಾಷ್ಟ್ರೀಯ ತಂತ್ರಜ್ಞಾನ ಮಾಹಿತಿ ಸೇವೆಯ ವಿವಿಧ ದತ್ತಾಂಶ ಭಂಡಾರಕ್ಕೂ ಸಂಪರ್ಕ ಕಲ್ಪಿಸಲಾಗಿದೆ. ಇದಲ್ಲದೇ ಸಾರ್ವಜನಿಕ ಸಂಪರ್ಕ ಲಭ್ಯವಿರುವ ಸುಮೂರು ೩೪೦ ದತ್ತಾಂಶ ಭಂಡಾರಗಳಿಗೆ ಸಂಪರ್ಕ ಹೊಂದಿರುವ ತಂಮಾಸೇಯ ೧೩೦ ಸಂಗ್ರಹಗಳು ಶುದ್ಧ ಹಾಗೂ ಅನ್ವಯಿಕ ವಿಜ್ಞಾನ, ಇಂಜನಿಯರಿಂಗ್, ತಂತ್ರಜ್ಞಾನಕ್ಕೆ ಸಂಬಂಧಿಸಿದ್ದರೆ, ೭೦ ಸಂಗ್ರಹಗಳು ವ್ಯವಹಾರ ಮತ್ತು ವ್ಯಾಪಾರ ಮಾಹಿತಿಗೆ ಸಂಬಂಧಿಸಿದವು. ತಂಮಾಸೇಯಲ್ಲಿ ದಶಲಕ್ಷಕ್ಕೂ ಮೀರಿದ ಪುಸ್ತಕ/ಪತ್ರಿಕೆ ವಿಚಾರ ಸಂಕಿರಣ/ಸಮ್ಮೇಳನಗಳ ನಡವಳಿಕೆಗಳು, ಸಂಶೋಧನ ಲೇಖನಗಳು ಹಾಗೂ ೫೦ಕ್ಕೂ ಹೆಚ್ಚು ಪೇಟೆಂಟ್ ಪಡೆದ ದಸ್ತಾವೇಜುಗಳಲ್ಲಿನ ಮಾಹಿತಿಗೆ ಪ್ರವೇಶ ದೊರಕಿಸಿಕೊಡುತ್ತವೆ. ಭಾರತ ಸರಕಾರ ವಿಜ್ಞಾನ, ಕೈಗಾರಿಕೆ, ತಂತ್ರಜ್ಞಾನಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಒದಗಿಸಲು ತಂತ್ರಜ್ಞಾನ ಮಾಹಿತಿ ಮುನ್ಸೂಚನೆ ಮತ್ತು ಮೌಲ್ಯ ನಿರ್ಧಾರಣ ಮಂಡಳಿಗೆ ಸಂಬಂಧಿಸಿದ ದತ್ತಾಂಶವನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ತಂಮಾಸೇಗೆ ವಹಿಸಿದೆ.

ಮಾಹಿತಿ ಬಯಸುವವರು ನಿರ್ದಿಷ್ಟ ನಮೂನೆಯಲ್ಲಿ ತಮ್ಮ ಸಂದೇಹಗಳನ್ನು ಪ್ರಶ್ನೆಗಳನ್ನು, ಸಾಧ್ಯವಾದಷ್ಟು ನಿಷ್ಕೃಷ್ಟವಾಗಿ ನಮೂದಿಸಿ ಅಂಚೆ, ದೂರಲಿಪಿ, ಛಾಯಾವರ್ಗಾವಣೆ ಮೂಲಕ ಕಳುಹಿಸಬಹುದು. ಈಗಾಗಲೇ ತಮ್ಮಲ್ಲಿರುವ ಮಾಹಿತಿಯನ್ನು ಒದಗಿಸಿದರೆ ಉತ್ತಮ. ಬೇಡಿಕೆಗೆ ಅನುಗುಣವಾಗಿ ನಿರ್ದಿಷ್ಟ ವರದಿ, ಅಥವಾ ತತ್ಸಂಬಂಧಿ ಮಾಹಿತಿಯ ಕಡತವನ್ನೇ ತಂಮಾಸೇ ಗ್ರಾಹಕರಅನುಕೂಲಕ್ಕೆ ತಕ್ಕಂತೆ ಅಂಚೆ, ದೂರಲಿಪಿ, ಸಂದೇಶವಾಹಕ, ಛಾಯಾವರ್ಗಾವಣೆ, ಫ್ಲಾಪಿತಟ್ಟೆ, ಗಣಕ ವರ್ಗಾವಣೆ ಮೂಲಕ ಕಳುಹಿಸುವ ಸೌಲಭ್ಯ ಉಂಟು. ಸರಳ ಹಾಗೂ ನಿರ್ದಿಷ್ಟ ಮಾಹಿತಿ ನೀಡಲು ಬಂಡವಾಳ ಬೇಕಾದರೆ ಸಂಕೀರ್ಣ ಮಾಹಿತಿಗೆ ಹೆಚ್ಚು ಸಮಯ ಹಿಡಿಯುತ್ತದೆ. ವಿಧಿಸುವ ಶುಲ್ಕ, ಪಡೆಯುವ ಸೇವೆಯ ಮೇಲೆ ಅವಲಂಬಿತವಾಗಿದೆ.

ಭಾತಂಮಾಕಂಪ ತನ್ನ ಉದ್ದೇಶಕ್ಕನುಗುಣವಾಗಿ ಹಲವಾರು ಸಂಶೋಧನೆ, ಅಭಿವೃದ್ಧಿ ಸಂಘಟನೆಗಳು, ಕೈಗಾರಿಕಾ ಸಂಘಟನೆಗಳು, ತಂತ್ರಜ್ಞಾನ ಉದ್ಯಮಶೀಲರ ಸಂಘಗಳು, ಕೇಂದ್ರ ಹಾಗೂ ರಾಜ್ಯ ಅಭಿವೃದ್ಧಿ ಅಭಿಕರಣಗಳೊಂದಿಗೆ ನಿರಂತರ ಸಂಪರ್ಕ ಹೊಂದಿದೆ. ತನ್ನ ಚಟುವಟಿಕೆಗಳನ್ನು ಉದ್ಯಮಶೀಲರಿಗೆ ಪರಿಚಯಿಸಲು ದೇಶಾದ್ಯಂತ ಕಮ್ಮಟಗಳನ್ನು, ವಿಚಾರಸಂಕಿರಣಗಳನ್ನು ಇತರ ಸಂಘಟನೆಗಳೊಂದಿಗೆ ಏರ್ಪಡಿಸಿದೆ.

**ಉಪಸಂಹಾರ**

ಉತ್ತಮ ತಂತ್ರಜ್ಞರನ್ನು ಹೊಂದಿದ ನಮ್ಮ ದೇಶದಲ್ಲಿ ಅವರಿಗೆ ಬೇಕಾದ ಧನಸಹಾಯ, ಮಾಹಿತಿ ಪೂರೈಕೆಯ ಕೊರತೆಯನ್ನು ತುಂಬಲು ಭಾತಂಮಾಕಂಪ ತನ್ನ ಕಾರ್ಯವನ್ನು ಸರಿಯಾದ ದಿಕ್ಕಿನಲ್ಲಿ ಆರಂಭಿಸಿದೆ. ಸಂಸ್ಥೆ ತನ್ನಿಂದ ಧನಸಹಾಯ ಪಡೆದ ಉದ್ಯಮಶೀಲರೊಡನೆ ನಡೆಸಿದ ಅಭಿಮುಖಿಯಲ್ಲಿ ವ್ಯಕ್ತಗೊಂಡ ಅಭಿಪ್ರಾಯಗಳೆಂದರೆ:

೧ ಸಾಹಸೋದ್ಯಮಗಳಿಗೆ ನೀಡುವ ನೆರವು ಸಾಮ್ಯ ಬಂಡವಾಳದ ರೂಪದಲ್ಲಿಯೇ ಇರಬೇಕು.

೨ ಸಾಹಸೋದ್ಯಮಗಳಿಗೆ ದುಡಿಯುವ ಬಂಡವಾಳ ದೊರಕುವುದು ತಡವಾಗುತ್ತಿದೆ.

೩ ಉತ್ಪನ್ನದ ಮಾರಾಟದಲ್ಲಿ ತೊಡಕುಗಳಿವೆ. ಅದಕ್ಕೆ ತಕ್ಕ ವ್ಯವಸ್ಥೆಯಾಗಬೇಕು.

ಪೂರ್ಣ ಧನಸಹಾಯವನ್ನು ಸಾಮ್ಯ ಬಂಡವಾಳದ ರೂಪದಲ್ಲಿ ನೀಡಲು ಕಂಪನಿ ಕಾನೂನಿಗೆ ತಿದ್ದುಪಡಿಯು

ಅಗತ್ಯವಿದೆ. ಧನಸಹಾಯ ಪಡೆದ ಎಲ್ಲ ಕಂಪನಿಗಳಿಗೂ ದುಡಿಯುವ ಬಂಡವಾಳದ ಅಗತ್ಯತೆಯನ್ನು ಭಾತಂಮಾಕಂಪ ಪೂರೈಸುವುದು ಸಂಸ್ಥೆಯ ಸಾಮರ್ಥ್ಯಕ್ಕೂ ನಿಲುಕದ್ದು. ಆದುದರಿಂದ ಮೊದಲ ಎರಡುವರುಷಗಳು ದುಡಿಯುವ ಬಂಡವಾಳವನ್ನು ಕೆಲವು ಸಂದರ್ಭಗಳಲ್ಲಿ ನೀಡಲು ಭಾತಂಮಾಕಂಪ ಸಿದ್ಧವಾಗಿದೆ. ಭಾತಂಮಾಕಂಪ ಉತ್ಪನ್ನಗಳನ್ನು ಮಾರಾಟ ಮಾಡುವ ಜವಾಬ್ದಾರಿಯನ್ನು ಹೊರಲು ಸಾಧ್ಯವಾಗುವುದಿಲ್ಲ. ಆದರೆ ಆ ಸೇವೆಯನ್ನು ನೀಡುವ ಉದ್ಯಮಗಳಿಗೆ ಧನಸಹಾಯ ನೀಡುವ ಭರವಸೆಯನ್ನು ಭಾತಂಮಾಕಂಪದ ಅಧ್ಯಕ್ಷರು ನೀಡಿದ್ದಾರೆ.

ಇಂದು ಅಸ್ವಸ್ಥವಾಗಿರುವ ಹಲವು ಕೈಗಾರಿಕಾ ಘಟಕಗ ಅಸ್ವಸ್ಥತೆಗೆ ಮೂಲ ಕಾರಣ, ದುಡಿಯುವ ಬಂಡವಾಳದ ಕೊರ ಹಾಗೂ ಉತ್ಪನ್ನಗಳ ಮಾರಾಟಕ್ಕೆ ಸರಿಯಾದ ವ್ಯವ ಇಲ್ಲದಿರುವುದು ಎಂದು ಕೈಗಾರಿಕೋದ್ಯಮಿಗ ಅಭಿಪ್ರಾಯಪಡುತ್ತಾರೆ. ಹಾಗಾಗಿ ಅವುಗಳತ್ತ ಹೆಚ್ಚಿ ಗಮನಹರಿಸುವುದು ಅಗತ್ಯ. ಆದರೆ ಸಾಹಸೋದ್ಯಮಗಳಿಗ ಅದರ ಸೋಂಕು ತಟ್ಟದಂತೆ ನೋಡಿಕೊಳ್ಳಬೇಕೆಂಬುದರ ಬ ಎರಡು ಮಾತಿಲ್ಲ.

*ಬ್ಯಾಂಕಿಂಗ್ ಪ್ರಪಂಚ – ಜೂನ್ ೧೯*

# ಕಂಬನಿ

ಈ ಬಾರಿಯ ಸಂಪಾದಕೀಯವನ್ನು ದುಃಖದ ಸಂಗತಿಯೊಂದಿಗೆ ಆರಂಭಿಸಬೇಕಾಗಿದೆ. ಅದು ವಿ.ಸೀ. ಅವರ ನಿಧನ.

ಪ್ರೊ. ವಿ. ಸೀತಾರಾಮಯ್ಯ ಅವರು ಕನ್ನಡ ಸಾಹಿತ್ಯದ ದಿಗ್ಗಜಗಳಲ್ಲೊಬ್ಬರು. ಕನ್ನಡ ನವೋದಯದ ಕಾಲದಲ್ಲಿ ಹೊಸ ಬಗೆಯ ಕವನಗಳನ್ನು ಬರೆದು ಪ್ರಚಾರ ಮಾಡಿ ಅವನ್ನು ಆಸ್ವಾದಿಸುವ ಹಾಗೂ ವಿಮರ್ಶಾತ್ಮಕವಾಗಿ ಅಭ್ಯಸಿಸುವ ಹಾದಿಯನ್ನು ತೋರಿಸಿದವರು. ಬಿ.ಎಂ.ಶ್ರೀ ಅವರು ಕಟ್ಟಿದ ಕನ್ನಡ ಪಡೆಯ ಮುಂಚೂಣಿಯಲ್ಲಿ ವಿ.ಸೀ. ಅವರೂ ಇದ್ದರು.

ಹಣ ಮತ್ತು ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಬ್ಯಾಂಕಿಂಗ್ ಪ್ರಪಂಚ ಇವರ ಸಾವಿಗಾಗಿ ಕಂಬನಿಗರೆಯುತ್ತಿರುವುದಕ್ಕೆ ವಿಶೇಷವಾದ ಕಾರಣವೊಂದುಂಟು. ಜೀವನದ ಯಾವ ಕ್ಷೇತ್ರವೇ ಆಗಲಿ, ಕಾವ್ಯದಿಂದ ಹೊರಗಾಗಿರಬೇಕಾದುದೇನೂ ಇಲ್ಲ. ಎಲ್ಲವನ್ನೂ ಒಳಗೊಳ್ಳುವಂಥದು ಸಾಹಿತ್ಯ. ವಿ.ಸೀ. ಅವರ ವೈಶಿಷ್ಟ್ಯವೆಂದರೆ ಅರ್ಥಶಾಸ್ತ್ರದಿಂದ ಸಾಹಿತ್ಯಕ್ಷೇತ್ರಕ್ಕೆ ಅವರು ಬಂದದ್ದು. ಅರ್ಥಶಾಸ್ತ್ರವನ್ನು ವಿಶೇಷವಾಗಿ ಅಧ್ಯಯನ ಮಾಡಿ ಪದವಿ ಪಡೆದ ವಿ.ಸೀ. ಅವರು ಕನ್ನಡದ ಅಧ್ಯಾಪಕರಾದದ್ದು ಒಂದು ವಿಶೇಷ. ಸಾಹಿತ್ಯಕ್ಕಾದ ಲಾಭವನ್ನು ಅರ್ಥಶಾಸ್ತ್ರಕ್ಕಾದ ನಷ್ಟ ಎಂದು ಹೇಳಬಹುದಾದರೂ ವಿ.ಸೀ. ಅವರು ಅರ್ಥಶಾಸ್ತ್ರದಲ್ಲಿ ಆಸಕ್ತಿಯನ್ನು ಎಂದೂ ಕಳೆದುಕೊಂಡವರಲ್ಲ. ಕಾವ್ಯ ಪ್ರಬಂಧ ವಿಮರ್ಶೆಗಳ ಉತ್ತುಂಗ ಶಿಖರಗಳನ್ನೇರಿದ ವಿ.ಸೀ. ಅವರು ಅರ್ಥಶಾಸ್ತ್ರದ ಅಧ್ಯಯನವನ್ನು ಮುಂದುವರಿಸಿಕೊಂಡೇ ಬಂದಿದ್ದರು. ಆ ಕ್ಷೇತ್ರದಲ್ಲಾಗುತ್ತಿದ್ದ ಬೆಳವಣಿಗೆಗಳನ್ನೆಲ್ಲಾ ಅವಲೋಕಿಸುತ್ತಿದ್ದರು. ವೈಯಕ್ತಿಕ ಜಂಜಡಗಳೇನೇ ಇರಲಿ, ಇಂಗ್ಲೆಂಡಿನ 'ದಿ ಇಕಾನಮಿಸ್ಟ್' ಪತ್ರಿಕೆಯನ್ನು ಬಿಡದೆ ತರಿಸಿಕೊಂಡು ಓದುತ್ತಿದ್ದರೆಂಬುದು ತುಂಬ ಪ್ರಸಿದ್ಧವಾದ ಮಾತಾಗಿದೆ. ಅರ್ಥಶಾಸ್ತ್ರದ ಸಂಕೀರ್ಣ ವಿಚಾರಗಳನ್ನೆಲ್ಲ ಅವರು ಯಾರೊಂದಿಗಾದರೂ ಚರ್ಚಿಸಬಲ್ಲವರಾಗಿದ್ದರು.

ಹಣದ ಅಧ್ಯಯನ ಕ್ಷೇತ್ರಕ್ಕೆ ವಿ.ಸೀ. ಅವರ ಕೊಡುಗೆ ಅಸಾಧಾರಣವಾದ್ದು. ೧೯೩೦ರಷ್ಟು ಹಿಂದೆಯೇ ಅವರು 'ಹಣ ಪ್ರಪಂಚ' ಎಂಬ ಉದ್ಗ್ರ ಕೃತಿಯೊಂದನ್ನು ಬರೆದರು. ಈಗಿನ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಂತೆ ದಿನಚರಿಯ ಬದುಕಿನಲ್ಲಿ ಅನೇಕ ಏಳು ಬೀಳುಗಳೂ ಕಷ್ಟ ಸುಖಗಳೂ ನ್ಯಾಯ ಅನ್ಯಾಯಗಳೂ ಹಣದಿಂದ ಉಂಟಾಗುತ್ತವೆ. ಸಂಪತ್ತಿನ ಉತ್ಪತ್ತಿ, ಮಾರುವೆ, ಹಂಚಿಕೆ, ಭೋಗ ಸಾಧನೆಗಳಲ್ಲೆಲ್ಲ ಹಣದ ಸ್ಥಾನ ದೊಡ್ಡದು ಎಂದು ಆರಂಭವಾಗುವ ಈ ಪುಸ್ತಕದ ಸುಮಾರು ಮುನ್ನೂರೈವತ್ತು ಪುಟಗಳಲ್ಲಿ ವಿ.ಸೀ. ಅವರು ಹಣದ ವಿಚಿತ್ರ ವ್ಯಾಪಾರಗಳನ್ನು ಕೇವಲ ಮಧ್ಯಸ್ಥಿಕೆಗಾಗಿ ಸೃಷ್ಟಿಸಲಾದ ಈ ಸಾಧನ, ಇಂದು ಹೇಗೆ ಒಂದು ತೊಡಕಿನ ವ್ಯವಸ್ಥೆಯಾಗಿ ಪರಿಣಮಿಸಿದೆಯೆಂಬುದನ್ನು ತುಂಬ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ವಿಚಾರವನ್ನು ಕುರಿತ ಕನ್ನಡದ ಮೊಟ್ಟಮೊದಲನೆಯ ದೊಡ್ಡ ಕೃತಿಯಾದ 'ಹಣ ಪ್ರಪಂಚ' ಅನೇಕ ದೃಷ್ಟಿಗಳಿಂದ ಪಥ ಪ್ರದರ್ಶಕವಾದ್ದು. ಶಾಸ್ತ್ರ ಸಾಹಿತ್ಯಗಳೆರಡು ಮೇಳೈಸಿದಾಗ ಒಂದು ಕೃತಿ ಎಷ್ಟು ಸುಂದರವಾಗಿರಬಲ್ಲುದು ಎಂಬುದಕ್ಕೆ ಇದು ನಿದರ್ಶನ.

ಹಣದ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿ.ಸೀ. ಅವರು ಇಲ್ಲಿ ಕನ್ನಡಕ್ಕೆ ಅನೇಕ ಪಾರಿಭಾಷಿಕ ಪದಗಳನ್ನು ನೀಡಿದ್ದಾರೆ. ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಪ್ರೊ. ಎನ್.ಎಸ್. ಸುಬ್ಬರಾಯರು ಇದರ ಬಗ್ಗೆ ಹೀಗೆ ಹೇಳಿದ್ದಾರೆ: "ಇಂಗ್ಲೀಷಿನಲ್ಲಿ 'ಫಿನಾನ್ಸ್' ಎಂಬ ಒಟ್ಟು ಹೆಸರಿನಲ್ಲಿ ಅಡಕವಾಗುವ ಅತಿ ತೊಡಕಿನ ವಿಷಯಗಳನ್ನು ವಿವರಿಸುವುದರಲ್ಲಿ ಅವರು ಪಾಂಡಿತ್ಯವನ್ನು ತುಂಬಿದ ತಿಳಿವಳಿಕೆಯನ್ನೂ ಪ್ರಯೋಗಿಸಿದ್ದಾರೆಂದು ನಾನು ಗೊತ್ತಾಗಿ ಹೇಳಬಲ್ಲೆ" ಎಂದಿದ್ದಾರೆ. ರಿಸರ್ವ್ ಬ್ಯಾಂಕಿನ ಕಾರ್ಯಕಲಾಪಗಳನ್ನು ಕುರಿತ ಹೊತ್ತಗೆಯೊಂದನ್ನೂ ಅನುವಾದಿಸಿರುವ ವಿ.ಸೀ. ಅವರು ಅರ್ಥಶಾಸ್ತ್ರ ಕ್ಷೇತ್ರದಲ್ಲಿ ಮುಖ್ಯವಾಗಿ ಹಣ ಬ್ಯಾಂಕಿಂಗ್ ಕುರಿತು, ಇನ್ನೂ ಹೆಚ್ಚು ಕೆಲಸ ಮಾಡಲು ಸಾಧ್ಯವಾಗಲಿಲ್ಲವಲ್ಲ ಎಂಬುದು ನಮ್ಮ ಕೊರಗು. ಅಂತೂ ಕನ್ನಡದಲ್ಲಿ ಈ ಬಗೆಯ ಸಾಹಿತ್ಯ ರಚಿಸಿದ ಮೊದಲಿಗರಲ್ಲೊಬ್ಬರಾದ ವಿ.ಸೀ. ಅವರಿಗೆ ಬ್ಯಾಂಕಿಂಗ್ ಪ್ರಪಂಚ ಶ್ರದ್ಧಾಂಜಲಿ ಅರ್ಪಿಸುತ್ತದೆ.

**ಭಾರತೀಯ ಸ್ಟೇಟ್ ಬ್ಯಾಂಕ್ ಕರ್ನಾಟಕ ವಲಯ**

ಭಾರತೀಯ ಸ್ಟೇಟ್ ಬ್ಯಾಂಕಿಗೆ ಸಂಬಂಧಿಸಿದಂತೆ ಆಗಿರುವ ಮಹತ್ವದ ಸಾಧನೆಯೊಂದನ್ನೂ ನಾವು ಇಲ್ಲಿ ದಾಖಲಿಸಬೇಕಾಗಿದೆ. ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯ ಬಂತು ಎಂಬ ಹಾಗೆ, ಭಾರತದ ಈ ಪ್ರತಿಷ್ಠಿತ ಬ್ಯಾಂಕಿನ ಕರ್ನಾಟಕ ವಲಯ ಕೊನೆಗೂ ಆರಂಭವಾಗಿದೆ. ಇದಕ್ಕಾಗಿ ಅನೇಕ ವರ್ಷಗಳಿಂದ ಈ ಬ್ಯಾಂಕಿನ ಉದ್ಯೋಗಿಗಳೂ, ಕರ್ನಾಟಕದ ಅಭ್ಯುದಯದಲ್ಲಿ ಆಸಕ್ತರಾದ ಇತರರೂ ಬಹಳಷ್ಟು ಶ್ರಮಿಸಿದ್ದಾರೆ. ಚಳವಳಿ ಮಾಡಿದ್ದಾರೆ. ದೆಹಲಿಯ ತನಕ ದೂರು ಹೊತ್ತಿದ್ದಾರೆ. ಸಂಸತ್ತಿನಲ್ಲಿ ಈ ವಿಚಾರ ಪದೇ ಪದೇ ಚರ್ಚಿತವಾಗುವಂತೆ ಮಾಡಿದ್ದಾರೆ. ಭಾರತದ ಉಳಿದ ಬಹುತೇಕ ರಾಜ್ಯಗಳಿಗೆ ಅವವುಗಳವೇ ಆದ ಸ್ಥಳೀಯ ಪ್ರಧಾನ ಕಛೇರಿಗಳು ಇರುವಾಗ, ಪ್ರತ್ಯೇಕ ವಲಯಗಳಿರುವಾಗ ಕರ್ನಾಟಕಕ್ಕೆ ಮಾತ್ರ ಏಕೆ ಬೇಡ ಎಂಬ ಪ್ರಶ್ನೆಯನ್ನು ಹಾಕಿ ಹಾಕಿ ನಮ್ಮವರು ಬಹಳ ಬಸವಳಿದಿದ್ದಾರೆ. ಒಂದಿಲ್ಲೊಂದು

ಕಾರಣದಿಂದ ಸರಕಾರ ಇದನ್ನು ತಳ್ಳಿಹಾಕುತ್ತಲೇ ಬಂದಿತ್ತು. ಕರ್ನಾಟಕಕ್ಕೆ ಪ್ರತ್ಯೇಕ ವಲಯ ಬಾರದಂತೆ ತಡೆಯುತ್ತಿದ್ದ ಪಟ್ಟಭದ್ರಹಿತಗಳೇ ಈ ಆಶಯ ನೆರವೇರದೆ ಇದ್ದದ್ದಕ್ಕೆ ಕಾರಣ. ಆದರೆ ಇದನ್ನು ಯಾವ ನೆವವನ್ನೂ ಒಡ್ಡುವುದು ಸಾಧ್ಯವಾಗದೆ ಹೋದಾಗ ಕರ್ನಾಟಕದ ನ್ಯಾಯಬದ್ಧ ಬೇಡಿಕೆಯನ್ನು ಪೂರೈಸುವುದು ಅನಿವಾರ್ಯವಾದಾಗ ಸರಕಾರ ಮಣಿದಿದೆ. ಕರ್ನಾಟಕಕ್ಕೆ ಪ್ರತ್ಯೇಕ ವಲಯವೊಂದು ಆರಂಭವಾಗಿದೆ. ಆದರೆ ಒಂದು ಕೊರತೆ ಇದನ್ನು ಕರ್ನಾಟಕ ವಲಯವೆನ್ನದೆ ಬೆಂಗಳೂರು ವಲಯವೆಂದು ಕರೆಯಲಾಗಿದೆ. ಮದರಾಸ್ ವಲಯ, ಮುಂಬಯಿ ವಲಯ ಎಂದು ಮುಂತಾಗಿ ಉಳಿದ ವಲಯಗಳನ್ನು ಆಯಾ ಸ್ಥಳೀಯ ಪ್ರಧಾನ ಕಛೇರಿಗಳಿರುವ ಸ್ಥಳಗಳ ಹೆಸರಿನಿಂದಲೇ ಕರೆದಿರುವುದರಿಂದ ಇದನ್ನೂ ಅಂತೆಯೇ ಬೆಂಗಳೂರು ವಲಯವೆಂದು ಕರೆಯಲಾಗಿದೆಯೆಂಬುದಾಗಿ ವಿವರಣೆ ನೀಡಬಹುದು. ಆದರೆ ಮದರಾಸ್, ಮುಂಬಯಿ ವಲಯಗಳು ಆರಂಭವಾದಾಗ ಮದರಾಸ್ ಮುಂಬಯಿಗಳು ಆಯಾ ಪ್ರಾಂತಗಳ ಹೆಸರುಗಳೂ ಆಗಿದ್ದುವೆಂಬುದನ್ನು ಮರೆಯಬಾರದು. ಕಲ್ಕತ್ತೆಯಲ್ಲಿ ಸ್ಥಳೀಯ ಪ್ರಧಾನ ಕಚೇರಿ ಹೊಂದಿರುವ ವಲಯವನ್ನು ಬಂಗಾಲ ವಲಯವೆಂದೇ ಕರೆಯಲಾಗಿದೆಯೆಂಬುದನ್ನು ಗಮನಿಸಬೇಕು. ಕಲ್ಕತ್ತ ಎಂಬುದು ಪ್ರಾಂತದ ಹೆಸರಾಗಿರಲಿಲ್ಲ. ರಾಜ್ಯದ ಹೆಸರೂ ಅಲ್ಲ. ಇದು ಹೇಗೂ ಇರಲಿ, ಬೆಂಗಳೂರು ವಲಯವೆಂದೇ ಕರೆದಿದ್ದರೂ ಕರ್ನಾಟಕಕ್ಕೆ ಪ್ರತ್ಯೇಕ ವಲಯ ಸ್ಥಾಪಿತವಾಯಿತೆಂಬುದೇ ಸಮಾಧಾನದ ಸಂಗತಿ.

ಆದರೂ ಕರ್ನಾಟಕಕ್ಕೆ ನ್ಯಾಯ ಸಂದಂತಿಲ್ಲ. ಹೊಸ ವಲಯದ ನಿರ್ವಹಣೆಗೆ ಅಗತ್ಯವಾದ ಉನ್ನತಾಧಿಕಾರಿಗಳನ್ನೆಲ್ಲ ಹೊರಗಡೆಯಿಂದಲೇ ತರಲಾಗಿದೆಯೆಂಬುದೊಂದು ಆಕ್ಷೇಪಣೆ. ಕರ್ನಾಟಕದವರೇ ಆದವರು ಜ್ಯೇಷ್ಠತೆ, ಅರ್ಹತೆಗಳ ದೃಷ್ಟಿಯಿಂದ ಉನ್ನತ ಹೊಣೆ ಹೊರಬಹುದಾಗಿರುವಾಗ ಉದ್ದೇಶಪೂರ್ವಕ-ವಾಗಿಯೇ ಎಂಬಂತೆ ಅವರನ್ನು ಬೇರೆ ಹುದ್ದೆಗಳಲ್ಲಿಟ್ಟು, ಕರ್ನಾಟಕ ವಲಯದ ರಚನೆಗೆ ವಿರೋಧವಾಗಿದ್ದವರನ್ನು ತಂದು ಕೂರಿಸಿರುವುದರ ಹಿಂದೆ ಯಾವುದೋ ಸಂಚು ಇದೆಯೆಂಬ ಆಂಜಿಕೆಗೆ ಕಾರಣವಿಲ್ಲದೆ ಇಲ್ಲ. ಹೊಸ ವಲಯದ ರಚನೆಯೊಂದಿಗೇ ಆ ವಲಯದ ಬ್ಯಾಂಕಿಂಗ್ ಕಛೇರಿಗಳ ಹುದ್ದೆಗಳಿಗೆ ಅರ್ಜಿಗಳನ್ನು ಕರೆಯಲು, ಅಭ್ಯರ್ಥಿಗಳ ಆಯ್ಕೆ ಮಾಡಲು ಪ್ರತ್ಯೇಕವಾದ ನೇಮಕಾತಿ ಮಂಡಲಿಯ ರಚನೆಯಾಗಬೇಕಾದ್ದು ನಿಯಮ. ಭಾರತೀಯ ಸ್ಟೇಟ್ ಬ್ಯಾಂಕಿನ ಸಹವರ್ತಿ ಬ್ಯಾಂಕುಗಳಿಗೆ ನೇಮಕಾತಿಗೂ ಈ ಮಾತು ಅನ್ವಯಿಸುತ್ತದೆ. ಇವುಗಳ ರಚನೆ ಮಾಡದೆ ವಿಳಂಬ ಮಾಡುತ್ತಿದ್ದ ಉದ್ಯೋಗಿಗಳಿಂದ ಪ್ರತಿಭಟನೆ ಪ್ರದರ್ಶನಗಳಾದ ಮೇಲೆಯೇ ಇಂಥ ಅಹಿತಕರ ಸನ್ನಿವೇಶಗಳಿಗೆ ಎಡೆಕೊಡುವುದು ಜಾಣತನವಲ್ಲ. ಗಾಳಿ ಎತ್ತ ಬೀಸುತ್ತಿದೆಯೆಂಬುದನ್ನು ಪ್ರಾಧಿಕಾರಿಗಳು ಅರಿತು ನ್ಯಾಯಸಮ್ಮತವಾದ ಧೋರಣೆ ತಳೆದು ಎಲ್ಲರ ವಿಶ್ವಾಸಗಳಿಸುವ ಯತ್ನ ಮಾಡುವುದೊಳಿತು.

**ಬಿರುಗಾಳಿಯ ಶಿಶು**

ಕಳೆದ ಸಂಚಿಕೆಯಲ್ಲಿ ಪ್ರಸ್ತಾವಿಸಲಾಗಿದ್ದಂತೆ ಅಖಿಲ ಕರ್ನಾಟಕದ ಎಲ್ಲ ಬ್ಯಾಂಕುಗಳ ಕನ್ನಡ ಸಂಘಗಳ ಒಕ್ಕೂಟವೊಂದು ಸ್ಥಾಪಿತವಾಗಿದೆಯೆಂಬುದು ವಿಶೇಷವಾಗಿ ಇಲ್ಲಿ ಉಲ್ಲೇಖಿಸಬೇಕಾದ ಸಂಗತಿ. ರಾಜ್ಯದ ಬ್ಯಾಂಕು ಕಛೇರಿಗಳಲ್ಲಿ ಕನ್ನಡದ ಹಾಗೂ ಕನ್ನಡಿಗರ ಸ್ಥಾನಮಾನಗಳನ್ನು ರಕ್ಷಿಸುವ ದಿಶೆಯಲ್ಲಿ ಇದೊಂದು ಗಮನಾರ್ಹವಾದ ಹೆಜ್ಜೆ. ಸಂಘಟನೆಯಿಲ್ಲದೆ ಯಾವ ಹೋರಾಟವೂ ಯಶಸ್ವಿಯಾಗದು. ಯಾವ ರಚನಾತ್ಮಕ ಕಾರ್ಯವೂ ಫಲಪ್ರದವಾಗದು. ಅತ್ಯಂತ ಮಹತ್ವಪೂರ್ಣ ಸನ್ನಿವೇಶದಲ್ಲಿ ಅಖಿಲ ಕರ್ನಾಟಕ ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತು ಜನ್ಮ ತಳೆದಿದೆಯೆನ್ನಬೇಕು. ಅದೊಂದು ಬಿರುಗಾಳಿಯ ಶಿಶು. ಹುಟ್ಟುತ್ತಲೇ ಹೋರಾಟದಲ್ಲಿ ಕಾಲಿಟ್ಟದ್ದು ಅದರ ವೈಶಿಷ್ಟ್ಯ. ಕರ್ನಾಟಕದ ಜೀವಶಿಲ್ಪಿ ಡಾ. ಎಂ. ವಿಶ್ವೇಶ್ವರಯ್ಯನವರ ಕಾಣ್ಕೆಯ ಫಲವಾಗಿ ಜನ್ಮವೆತ್ತಿದ, ಅಚ್ಚ ಕನ್ನಡ ಸಂಸ್ಥೆಯಾದ ಮೈಸೂರು ಬ್ಯಾಂಕು ಭಾರತೀಯ ಸ್ಟೇಟ್ ಬ್ಯಾಂಕಿನ ಅಂಗಸಂಸ್ಥೆಯಾಗಿ ಪರಿವರ್ತನೆಗೊಂಡ ಮೇಲೆ ಅನುಭವಿಸುತ್ತಿರುವ ಅವಸ್ಥಾಂತರದಿಂದ ಆಗಿರುವ ಅನ್ಯಾಯಗಳನ್ನು ನಿವಾರಿಸುವ ಸಲುವಾಗಿ ಆ ಸಂಸ್ಥೆಯ ಉದ್ಯೋಗಿಗಳು ನಡೆಸುತ್ತಿರುವ ಹೋರಾಟವನ್ನು ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತು ತನ್ನ ಹೋರಾಟವೆಂದು ಕೈಗೆತ್ತಿಕೊಂಡಿದ್ದು ಅತ್ಯಂತ ಔಚಿತ್ಯಪೂರ್ಣವಾದ್ದು. ಪರಿಷತ್ತಿನ ಕರಪತ್ರವೊಂದರಲ್ಲಿ ಹೇಳಿರುವಂತೆ ಕರ್ನಾಟಕದಲ್ಲೇ ಹುಟ್ಟಿ ಬೆಳೆದು ತನ್ನ ಕಾರ್ಯವ್ಯಾಪ್ತಿಯ ಹೆಚ್ಚು ಭಾಗವನ್ನು ಕರ್ನಾಟಕಕ್ಕೇ ಸೀಮಿತಗೊಳಿಸಿಕೊಂಡಿರುವ ಮೈಸೂರು ಬ್ಯಾಂಕಿನಲ್ಲಿ ಕಳೆದ ಮೂರು ವರ್ಷಗಳಿಂದೀಚೆಗೆ ಒಂದು ಸಾವಿರಕ್ಕೂ ಹೆಚ್ಚು ಮಂದಿ ಕನ್ನಡೇತರರಿಗೆ ಉದ್ಯೋಗ ಲಭಿಸಿದೆಯೆಂಬುದು ಎಂತಹ ಕನ್ನಡಿಗನಿಗೂ ಗಾಬರಿ ಹುಟ್ಟಿಸುವ ವಿಚಾರ. ಎಪ್ಪತ್ತರ ಹೊಸ್ತಿಲಲ್ಲಿರುವ ಈ ಬ್ಯಾಂಕಿನ ಈ ಬಾರಿಯ ನೇಮಕಾತಿಯಲ್ಲಿ ಮುನ್ನೂರಕ್ಕೂ ಹೆಚ್ಚು ಮಂದಿ ಕನ್ನಡೇತರರನ್ನು ಗುಮಾಸ್ತೆ ಹುದ್ದೆಗಳಿಗೆ ನೇಮಿಸಿಕೊಳ್ಳುವ ಹುನ್ನಾರ ನಡೆದದ್ದು ತುಂಬ ಆತಂಕದ ಬೆಳವಣಿಗೆ. ಕನ್ನಡಿಗರು ಕನ್ನಡೇತರರ ಬಗ್ಗೆ ಯಾವ ದ್ವೇಷ ಭಾವನೆಯನ್ನೂ ತಳೆದಿಲ್ಲ. ಆದರೆ ಕರ್ನಾಟಕದ ಬ್ಯಾಂಕುಗಳಲ್ಲಿಯೇ ಕನ್ನಡಿಗರಿಗೆ, ಕರ್ನಾಟಕದರಿಗೆ ಉದ್ಯೋಗ ದೊರಕದಿದ್ದರೆ ಅವರೇನು ಮಾಡಬೇಕು? ಬ್ಯಾಂಕಿನ ಪರಿವೀಕ್ಷಾ (ಪ್ರೊಬೇಷನರಿ) ಹಾಗೂ ತಾಂತ್ರಿಕ ಅಧಿಕಾರಿಗಳ ಹುದ್ದೆಗಳಿಗೂ ಶೇ. ೯೦ ರಷ್ಟು ಮಂದಿ ಕನ್ನಡೇತರರೇ ನೇಮಕವಾಗುತ್ತಿರುವುದೂ, ಈ ಬಾರಿ ಆಯ್ಕೆಯಾದ ಇಪ್ಪತ್ತಾರು ಮಂದಿ ಅಧಿಕಾರಿಗಳಲ್ಲಿ ಒಬ್ಬರಾದರೂ ಕನ್ನಡಿಗರಿರದಿರುವುದೂ ಕೇವಲ ಆಕಸ್ಮಿಕವೇನಲ್ಲ.

ಇದರ ಹಿಂದೆ ಪೂರ್ವ ನಿಯೋಜಿತ ಸಂಚೊಂದು ಇದೆಯೆಂದು ಯಾರಿಗಾದರೂ ಅನಿಸದಿರದು. ಈ ಬ್ಯಾಂಕಿನ ೪೪೦ ಶಾಖೆಗಳ ಪೈಕಿ ೪೦೦ ಶಾಖೆಗಳು ಕರ್ನಾಟಕದಲ್ಲಿವೆ. ಇವುಗಳ ಪೈಕಿ ಅರ್ಧದಷ್ಟು ಇರುವುದು ಗ್ರಾಮ ಪ್ರದೇಶಗಳಲ್ಲಿ. ಇಲ್ಲಿ ಕನ್ನಡೇತರರ ನೇಮಕವಾದರೆ ಅದರಿಂದ ಜನಸಾಮಾನ್ಯರಿಗೆ ದೊರಕುವ ಪುರುಷಾರ್ಥವಾದರೂ ಏನು? ಸಾಮಾಜಿಕ ಬ್ಯಾಂಕಿಂಗ್, ಹಿಂದುಳಿದವರ ಮುನ್ನಡೆ, ಗ್ರಾಮಗಳ ದತ್ತು ಸ್ವೀಕಾರ, ಸಮಗ್ರ ಗ್ರಾಮೀಣ ಅಭಿವೃದ್ಧಿ ಮುಂತಾದ ದೊಡ್ಡದೊಡ್ಡ ಮಾತುಗಳನ್ನಾಡುತ್ತಿರುವ ಬ್ಯಾಂಕುಗಳು ಜನಸಾಮಾನ್ಯರ ಭಾಷೆ ಗೊತ್ತಿರದ ಸಿಬ್ಬಂದಿ ವರ್ಗದಿಂದ ಏನನ್ನು ತಾನೆ ಸಾಧಿಸಬಲ್ಲವು? ಗಂಭೀರವಾಗಿ ಆಲೋಚಿಸಬೇಕಾದ ವಿಚಾರವಿದು. ಈ ಅನ್ಯಾಯದ ವಿರುದ್ಧ ಸೊಲ್ಲೆತ್ತಿದ ಪರಿಷತ್ತು ವರಿಷ್ಠರ ಗಮನ ಇತ್ತ ಹರಿಯುವಂತೆ ಮಾಡಿದೆ. ಭಾರತೀಯ ಸ್ಟೇಟ್ ಬ್ಯಾಂಕಿನ ಸ್ಥಳೀಯ ಪ್ರಧಾನ ಕಛೇರಿಯೊಂದು ಬೆಂಗಳೂರಿನಲ್ಲಿ ಆರಂಭವಾಗಿರುವುದರಿಂದ ಈ ರಾಜ್ಯ ವಲಯಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ನೇಮಕಾತಿ ಮಂಡಲಿಯೊಂದು ಬೆಂಗಳೂರಿನಲ್ಲಿ ರಚನೆಯಾಗುವದು ಅನಿವಾರ್ಯ. ಇದರೊಂದಿಗೆ ಈ ಅನ್ಯಾಯವೂ ನಿವಾರಣೆಯಾಗಬೇಕು. ಈ ಮಂಡಲಿಯ ಸದಸ್ಯರು ಯಾವುದೇ ಬಗೆಯ ಪೂರ್ವಾಗ್ರಹದಿಂದ ಪೀಡಿತರಾಗದೆ ಕನ್ನಡಿಗರಿಗೆ ನ್ಯಾಯ ಸಲ್ಲುವಂತೆ ನೋಡಿಕೊಳ್ಳಬೇಕು. ಹಾಗಾದೀತೆಂದು ನಮ್ಮ ಆಶಯ.

## ಬ್ಯಾಂಕ್ ವಿಕೇಂದ್ರೀಕರಣ

ಇದೇ ಸಮಯಕ್ಕೆ ಇನ್ನೊಂದು ವಿಚಾರವನ್ನೂ ಇಲ್ಲಿ ಪ್ರಸ್ತಾಪಿಸಬೇಕು. ಅದು ಬ್ಯಾಂಕಿಂಗ್ ವ್ಯವಸ್ಥೆಯ ವಿಕೇಂದ್ರೀಕರಣದ ಪ್ರಶ್ನೆ. ಹಳೆಯ ಇಂಪೀರಿಯಲ್ ಬ್ಯಾಂಕನ್ನು ರಾಷ್ಟ್ರೀಕರಿಸಿ ಭಾರತೀಯ ಸ್ಟೇಟ್ ಬ್ಯಾಂಕನ್ನು ಸ್ಥಾಪಿಸಿದಾಗ ಸರ್ಕಾರದ ಮುಂದಿದ್ದ ಗುರಿಯೆಂದರೆ ಗ್ರಾಮಾಂತರ ಪ್ರದೇಶಕ್ಕೆ ಬ್ಯಾಂಕನ್ನು ಕೊಂಡೊಯ್ಯುವುದು. ಗ್ರಾಮೀಣ ಜನಕ್ಕೆ ಅಗತ್ಯವಾದ ಧನ ಪೋಷಣೆ ನೀಡುವಲ್ಲಿ ಸ್ಥಳೀಯ ಲೇವಾದೇವಿಗಾರರಿಗೆ ಪರ್ಯಾಯವಾಗಿ ಆರಂಭವಾದ ಸಹಕಾರಿ ಚಳವಳಿ ಯಶಸ್ವಿಯಾಗದಿರುವುದರಿಂದ ಆತಂಕಗೊಂಡ ಪರಿಣತರ ಶಿಫಾರಸಿಗೆ ಅನುಗುಣವಾಗಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ಈ ಹೊಣೆಯನ್ನು ವಹಿಸಲಾಯಿತು. ತ್ವರಿತವಾಗಿ ಗ್ರಾಮ ಪ್ರದೇಶಗಳಲ್ಲಿ ಬ್ಯಾಂಕ್ ಶಾಖೆಗಳನ್ನು ತೆರೆಯಬೇಕೆಂದು ಸೂಚಿಸಲಾಯಿತು. ಹಳೆಯ ದೇಶೀಯ ಸಂಸ್ಥಾನಗಳಲ್ಲಿ ಸರ್ಕಾರಿ ಆಶ್ರಯದಲ್ಲಿ ಸ್ಥಾಪಿತವಾಗಿ ಬಹುತೇಕ ಆಯಾ ಸರ್ಕಾರಗಳ ಬ್ಯಾಂಕುಗಳಂತೆ ಕಾರ್ಯ ನಿರ್ವಹಿಸುತ್ತಿದ್ದ ಮೈಸೂರು ಬ್ಯಾಂಕಿನಂಥ ಸಂಸ್ಥೆಗಳನ್ನು ಭಾರತೀಯ ಸ್ಟೇಟ್ ಬ್ಯಾಂಕಿನ ಕೊರಳಿಗೆ ಕಟ್ಟಲಾಯಿತು. ಇವೆಲ್ಲಾ ಭಾರತೀಯ ಸ್ಟೇಟ್ ಬ್ಯಾಂಕ್ ಗುಂಪಿಗೆ ಸೇರಿದವು. ಗ್ರಾಮೀಣ ಶಾಖಾ ವಿಸ್ತರಣೆಯ ಕಾರ್ಯದಲ್ಲಿ ಇವೆಲ್ಲಾ ನಿರತವಾದವು. ಇದು ಸಹಜವೇ.

ಆದರೆ ಅಂದಿನಿಂದ ಇಂದಿನವರೆಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಮುದ್ರ ಸದೃಶ ಬದಲಾವಣೆಯೇ ಆಗಿದೆ. ೧೯೬೯ ರಿಂದೀಚೆಗೆ ರಾಷ್ಟ್ರದ ಅನೇಕ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾಗಿದೆ. ಭಾರತೀಯ ಸ್ಟೇಟ್ ಬ್ಯಾಂಕಿಗೂ ಇತರ ರಾಷ್ಟ್ರೀಕೃತ ಬ್ಯಾಂಕುಗಳಿಗೂ ಇರುವ ಭಿನ್ನತೆಯ ಗೆರೆ ಬಹಳ ತೆಳುವು. ಈ ಬ್ಯಾಂಕುಗಳೂ ಶಾಖೆಗಳನ್ನು ವಿಸ್ತರಿಸುವ ಕಾರ್ಯದಲ್ಲಿ ನಿರತವಾಗಿದೆ. ಬಹಳಮಟ್ಟಿಗೆ ಅತಿವ್ಯಾಪ್ತಿಯ ಪ್ರವೃತ್ತಿ ಉಂಟಾಗಿದೆ. ಇವುಗಳ ನಡುವಣ ಸ್ಪರ್ಧೆ ಅಸಹಜವೂ ಅಪವ್ಯಯಕಾರಿಯೂ ಅರ್ಥಹೀನವೂ ಎನಿಸುವ ಪರಿಸ್ಥಿತಿ ಉದ್ಭವಿಸಿದೆ. ಈ ಸಂಚಿಕೆಯಲ್ಲಿ ಈ ವಿಚಾರ ಕುರಿತ ಒಂದು ಗಂಭೀರ ಲೇಖನವೂ ಪ್ರಕಟವಾಗಿರುವುದನ್ನು ಓದುಗರು ಗಮನಿಸಬೇಕು.

ಹೀಗೆ ಒಂದು ನಿಟ್ಟಿನಲ್ಲಿ ಬ್ಯಾಂಕ್ ಕೇಂದ್ರೀಕರಣ ಪ್ರವೃತ್ತಿ ಬೆಳೆಯುತ್ತಿರುವಂತೆ ವಿಕೇಂದ್ರೀಕರಣದ ನಿಟ್ಟಿನಲ್ಲೂ ಪ್ರಯತ್ನಗಳು ನಡೆಯುತ್ತಿವೆಯೆನ್ನಬೇಕು. ಭಾರತೀಯ ಸ್ಟೇಟ್ ಬ್ಯಾಂಕಿನ ವಲಯಗಳ ನಿರ್ಮಾಣ ಒಂದು ದೃಷ್ಟಿಯಲ್ಲಿ ವಿಕೇಂದ್ರೀಕರಣವೇ. ಆದರೆ ಇತರ ರಾಷ್ಟ್ರೀಕೃತ ಬ್ಯಾಂಕುಗಳು ಕೇಂದ್ರೀಕೃತ ವ್ಯವಸ್ಥೆಗಳಾಗಿವೆ. ದಕ್ಷಿಣದಲ್ಲಿ ಸ್ಥಾಪಿತವಾದ ಬ್ಯಾಂಕು ಉತ್ತರದ ದೂರ ದೂರ ಕೇಂದ್ರಗಳಲ್ಲೂ ಉತ್ತರದಲ್ಲಿ ಸ್ಥಾಪಿತವಾದ ಬ್ಯಾಂಕು ದಕ್ಷಿಣದ ತುತ್ತ ತುದಿಯಲ್ಲೂ ಶಾಖೆಗಳನ್ನು ತೆರೆದು ಪರಸ್ಪರವಾಗಿ ಸ್ಪರ್ಧೆಯಲ್ಲಿ ನಿರತವಾಗುವುದಾಗಲಿ, ಅಮೂಲ್ಯ ಸಂಪನ್ಮೂಲಗಳನ್ನು ವ್ಯರ್ಥಗೊಳಿಸುವುದಾಗಲಿ ಸಿಬ್ಬಂದಿಯನ್ನು ಅಡ್ಡಾದಿಡ್ಡಿಯಾಗಿ ವರ್ಗ ಮಾಡುವುದಾಗಲಿ ಅಷ್ಟೇನೂ ವಿವೇಕದ ಕ್ರಮವೆನಿಸದು. ಬ್ಯಾಂಕುಗಳ ದಕ್ಷ ನಿರ್ವಹಣೆ, ನಿಯಂತ್ರಣ ಇವೆಲ್ಲ ಕ್ಲಿಷ್ಟವಾಗುವುದಲ್ಲದೆ ವಂಚನೆ ದುರನ್ವಯಗಳಿಗೂ ಎಡೆಯುಂಟಾಗುತ್ತದೆ. ಭಾಷೆಯ ಪ್ರಶ್ನೆಯೂ ಮುಖ್ಯವೇ. ಸ್ಥಳೀಯ ಹಾಗೂ ಪ್ರಾದೇಶಿಕ ಅಗತ್ಯಗಳನ್ನು ಅನುಲಕ್ಷಿಸಿ ಪೂರೈಸಬಲ್ಲ ಸಂಸ್ಥೆಗಳ ರಚನೆಯತ್ತ ಗಮನ ಕೊಡುವ ಸಲುವಾಗಿ ದೊಡ್ಡ ಬ್ಯಾಂಕುಗಳ ನೇತೃತ್ವದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ರಚನೆ ಒಂದು ರೀತಿಯಲ್ಲಿ ಬ್ಯಾಂಕ್ ವಿಕೇಂದ್ರೀಕರಣ ತತ್ವಕ್ಕೆ ಪರೋಕ್ಷವಾಗಿ ನೀಡಿದ ಮನ್ನಣೆಯೇ ಆಗಿದೆ.

ಆದ್ದರಿಂದ ಬ್ಯಾಂಕಿಂಗ್ ಸಂಸ್ಥೆಗಳ ದಕ್ಷತೆಯನ್ನು ಹೆಚ್ಚಿಸಿ ದರೋಡೆ ವಂಚನೆ ದುರನ್ವಯಗಳನ್ನು ಕಡಿಮೆ ಮಾಡಿ ವೆಚ್ಚವನ್ನು ತಗ್ಗಿಸಿ, ಉತ್ಪಾದಕತೆಯನ್ನು ಅಧಿಕಗೊಳಿಸಬೇಕಾದರೆ ವಿವಿಧ ವಲಯಗಳಿಗೆ ಬೇರೆ ಬೇರೆಯೇ ಬ್ಯಾಂಕಿಂಗ್ ಸಂಸ್ಥೆಗಳನ್ನು ರೂಪಿಸಬಾರದೇಕೆ? ಎಂಬುದನ್ನು ಕುರಿತು ತೀವ್ರವಾಗಿ ಚಿಂತಿಸಬೇಕಾಗಿದೆ. ಆಗ ಪ್ರಾದೇಶಿಕ ಬೆಳವಣಿಗೆಗೆ ಹೆಚ್ಚಿನ ಒತ್ತು ನೀಡುವುದು ಸಾಧ್ಯವಾಗುತ್ತದೆ. ವ್ಯರ್ಥ ಸ್ಪರ್ಧೆ ತಪ್ಪುತ್ತದೆ. ಪ್ರಾದೇಶಿಕ ಹಿತಾಸಕ್ತಿಗಳ ರಕ್ಷಣೆಯೂ ಆಗುತ್ತದೆ. ಭಾಷೆಯ ಪ್ರಶ್ನೆ ತನಗೆ ತಾನೇ ಬಹುಮಟ್ಟಿಗೆ ಇತ್ಯರ್ಥವಾಗುತ್ತದೆ. ಈ ನಿಟ್ಟಿನಲ್ಲಿ ಮೊದಲನೆಯ ಹೆಜ್ಜೆಯಾಗಿ ಹಳೆಯ ರಾಜ್ಯ ಬ್ಯಾಂಕುಗಳನ್ನು – ಮೈಸೂರು ಬ್ಯಾಂಕಿನಂಥವನ್ನು ಭಾರತೀಯ

ಸ್ಟೇಟ್ ಬ್ಯಾಂಕಿನ ತೆಕ್ಕೆಯಿಂದ ಬಿಡಿಸಿ ಮೊದಲಿನಂತೆಯೇ ಆಯಾ ರಾಜ್ಯಗಳ ವ್ಯಾಪ್ತಿಗೆ ಸೀಮಿತಗೊಳಿಸಬಾರದೇಕೆ? ಈ ನಿಟ್ಟಿನಲ್ಲಿ ಈ ಹಿಂದೆ ಅನೇಕರು ಸಲಹೆ ನೀಡಿದ್ದಾರೆ. ಇದನ್ನು ತೀವ್ರವಾಗಿ ಪರಿಶೀಲಿಸಿ ಕಾರ್ಯರೂಪಕ್ಕೆ ತರುವ ಕಾಲವೀಗ ಸನ್ನಿಹಿತವಾಗಿದೆ.

### ರಿಸರ್ವ್ ಬ್ಯಾಂಕಿನ ಅಧಿಕಾರ

ಆದರೆ ಈ ವಿಚಾರದಲ್ಲಿ ಸರ್ಕಾರದ ಚಿಂತನೆ ವೈಜ್ಞಾನಿಕವಾದ ದಿಕ್ಕಿನಲ್ಲಿ ಹರಿಯುತ್ತಿಲ್ಲವೆಂಬುದು ಸ್ಪಷ್ಟ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ಇಂದು ಹೆಚ್ಚು ಕಡಿಮೆ ಸರ್ಕಾರಿ ಇಲಾಖೆಗಳೆಂಬ ರೀತಿಯಲ್ಲಿ ನಿರ್ವಹಿಸಲ್ಪಡುತ್ತಿವೆ. ಬ್ಯಾಂಕುಗಳ ಜೀವಸತ್ವದ ಧಾರೆ ತೆಳ್ಳಗಾಗುತ್ತಿದೆಯೇನೋ ಎನಿಸುತ್ತಿದೆ. ಕೇಂದ್ರೀಯ ಬ್ಯಾಂಕ್ ಎಂಬ ಸೂರ್ಯನ ಸುತ್ತ ವಾಣಿಜ್ಯ ಹಾಗೂ ಇತರ ಬ್ಯಾಂಕುಗಳೂ ಹಣಕಾಸು ಸಂಸ್ಥೆಗಳೂ ಗ್ರಹಗಳೋಪಾದಿಯಲ್ಲಿ ಪರಿಭ್ರಮಿಸುತ್ತ ಧನಮಂಡಲವೆಂಬ ಹೆಸರು ಅನ್ವರ್ಥವಾಗುವ ರೀತಿಯಲ್ಲಿ ವರ್ತಿಸುವ ಆದರ್ಶ ಚಿತ್ರ ಮಸುಕಾಗುತ್ತ ನಡೆಯುತ್ತಿದೆ. ಸರಕಾರ ನಿರ್ಧರಿಸಿದ ಆರ್ಥಿಕ ನೀತಿಯ ಚೌಕಟ್ಟಿನೊಳಗೆ ಅದರ ಗುರಿಗಳ ಪೂರೈಕೆಯ ನಿಟ್ಟಿನಲ್ಲಿ ಬ್ಯಾಂಕಿಂಗ್ ಹಾಗೂ ಹಣ ವ್ಯವಸ್ಥೆಯನ್ನು ನಿಯಂತ್ರಿಸಿ ನಿರ್ದೇಶಿಸುವ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸುವಲ್ಲಿ ಹಾಗೂ ಸರಕಾರದ ಗೆಳೆಯ ದಾರ್ಶನಿಕ ಮಾರ್ಗದರ್ಶಿಯಾಗಿ ವರ್ತಿಸುವಲ್ಲಿ ಕೇಂದ್ರೀಯ ಬ್ಯಾಂಕಿನ ಸ್ಥಾನ ಮಹತ್ವದ್ದು. ಭರತದಲ್ಲಿ ಕೇಂದ್ರೀಯ ಬ್ಯಾಂಕಿಂಗ್ ಕಾರ್ಯಭಾರಗಳನ್ನು ನಿರ್ವಹಿಸುತ್ತಿರುವ ರಿಸರ್ವ್ ಬ್ಯಾಂಕಿನ ಪ್ರತಿಷ್ಠೆಯನ್ನು ಈ ದೃಷ್ಟಿಯಿಂದ ಎತ್ತರದಲ್ಲಿ ನಿಲ್ಲಿಸುವುದು ಅಗತ್ಯ. ಪ್ರಪಂಚದ ಅನೇಕ ದೇಶಗಳಲ್ಲಿರುವಂತೆ ಭಾರತದಲ್ಲಿ ಕೂಡ ರಿಸರ್ವ್ ಬ್ಯಾಂಕು ರಾಷ್ಟ್ರದ ಒಡೆತನದಲ್ಲಿರುವುದಾದರೂ ಅದರ ಸ್ವತಂತ್ರ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬೇಕು. ಅಂತಿಮವಾಗಿ ಸರಕಾರದ ಮಾತಿಗೇ ಬೆಲೆಯಾದರೂ ಕೇಂದ್ರೀಯ ಬ್ಯಾಂಕಿನ ಅಧಿಕಾರ ಸವೆಯುವಂಥ ಕರ್ಮ ಅನುಸರಿಸುವದು ಅನುಚಿತ. ಆದರೆ ಈಚಿನ ದಿಗಳಲ್ಲಿ ರಿಸರ್ವ್ ಬ್ಯಾಂಕ್ ಹಾಗೂ ಸರಕಾರದ ಋಣ ಸಂಬಂಧ ಆದರ್ಶಯುತವಾದ ರೀತಿಯಲ್ಲಿ ಮುಂದುವರಿ–ಯುತ್ತಿಲ್ಲವೇನೋ ಎನಿಸುತ್ತದೆ. ವಿದೇಶಗಳಲ್ಲಿರುವ ಅನಿವಾಸಿ ಭಾರತೀಯರು ಹಾಗೂ ಭಾರತೀಯ ಸಂಜಾತರು ಭಾರತದ ಕಂಪನಿಗಳ ಷೇರುಗಳಲ್ಲಿ ಹಣ ತೊಡಗಿಸುವ ಬಗ್ಗೆ ಸರ್ಕಾರ ಘೋಷಿಸಿದ ಸೂತ್ರದ ಅನ್ವಯದ ವಿಚಾರದಲ್ಲಿ ರಿಸರ್ವ್ ಬ್ಯಾಂಕ್ ತಳೆದ ಎಚ್ಚರಿಕೆಯ ನಿಲುವನ್ನು ಬದಿಗೊತ್ತಿ, ದೇಶೀಯ ಉದ್ಯಮವಲಯಗಳ ಆತಂಕವನ್ನು ಹೆಚ್ಚಿಸುವ ರೀತಿಯಲ್ಲಿ ಸರಕಾರ ಕ್ರಮ ತೆಗೆದುಕೊಂಡಿದ್ದು ಇತ್ತೀಚಿನ ಒಂದು ನಿದರ್ಶನ. ರಿಸರ್ವ್ ಬ್ಯಾಂಕ್ ಹಾಗೂ ಸರಕಾರದ ನಡುವಣ ಭಿನ್ನ ನಿಲುವುಗಳ ಬಗ್ಗೆ ಪತ್ರಿಕೆಗಳಲ್ಲಿ ನಾನಾ ಊಹಾಪೋಹಗಳು ಪ್ರಕಟವಾಗಿವೆ. ಇವು ಅಷ್ಟೇನೂ ಸಾಧುವಾದ ಪ್ರವೃತ್ತಿಗಳಲ್ಲವೆಂಬುದು ನಮ್ಮ ಅಭಿಪ್ರಾಯ. ವಿದೇಶಿ ಬಂಡವಾಳ ಸಂಸ್ಥೆಗಳು ತಲೆಮರೆಸಿಕೊಂಡು ಭಾರತಕ್ಕೆ ಪ್ರವೇಶ ಮಾಡುವ ಇಲ್ಲಿಯ ಉದ್ಯಮಗಳನ್ನು ವಶಪಡಿಸಿಕೊಳ್ಳುವ ಪ್ರಯತ್ನಗಳನ್ನು ಹತ್ತಿಕ್ಕುವುದು ಅತ್ಯಗತ್ಯ.

ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ನಿರ್ವಹಣೆಯ ದೋಷಗಳು, ಅನಿಷ್ಟಕಾರಿ ಪ್ರವೃತ್ತಿಗಳು ಇವಕ್ಕೆಲ್ಲಾ ರಿಸರ್ವ್ ಬ್ಯಾಂಕ್ ಹೊಣೆಯೆಂಬ ಧೋರಣೆಯೂ ಸರ್ಕಾರಿ ವಲಯಗಳಲ್ಲಿ ಬೆಳೆಯುತ್ತಿರುವಂತಿದೆ. ಬ್ಯಾಂಕುಗಳನ್ನು ಆರಂಭಿಸಲು ಹಾಗೂ ಹೊಸ ಶಾಖೆಗಳನ್ನು ತೆರೆಯಲು ಅನುಮತಿಯ ನೀಡಿಕೆಯ ವಿಚಾರದಲ್ಲಿ ರಿಸರ್ವ್ ಬ್ಯಾಂಕು ಅನೇಕ ಬಾರಿ ನಾನಾ ಬಗೆಯ ಒತ್ತಡಗಳಿಗೆ ಗುರಿಯಾಗಿದೆ. ಈ ವಿಚಾರದಲ್ಲಿ ಕೆಲವು ಸೂತ್ರಗಳನ್ನು ರಿಸರ್ವ್ ಬ್ಯಾಂಕ್ ಅನುಸರಿಸಬೇಕಾಗುತ್ತದೆ. ಆದರೆ ಹಲವೊಮ್ಮೆ ಅದು ಕೇಂದ್ರ ರಾಜ್ಯ ಸರಕಾರಗಳ ಒತ್ತಡವನ್ನು ಎದುರಿಸಬೇಕಾಗುತ್ತದೆ. ಬ್ಯಾಂಕ್ ವ್ಯವಹಾರವನ್ನು ಆರ್ಥಿಕ ದೃಷ್ಟಿಯಿಂದ ಅದು ಪರಿಗಣಿಸಬೇಕಾದ್ದು ನ್ಯಾಯಸಮ್ಮತ. ಆದರೆ ರಾಜಕೀಯ ಉದ್ದೇಶಗಳಿಂದ ಸರ್ಕಾರಗಳು ಹೊಸ ಶಾಖೆಗಳನ್ನು ತೆರೆಯಲು ಒತ್ತಡ ಹೇರುವುದುಂಟು. ಅಂತೆಯೇ ಸರ್ಕಾರಿ ವಲಯದ ಉದ್ಯಮಗಳ ನಷ್ಟವನ್ನು ತುಂಬಲು ಬ್ಯಾಂಕ್ ಉದರಿ ನೀಡಿಕೆಯ ವಿಚಾರದಲ್ಲೂ ರಿಸರ್ವ್ ಬ್ಯಾಂಕ್ ಶುದ್ಧ ಆರ್ಥಿಕ ಸೂತ್ರವನ್ನನುಸರಿಸಲು ಅಡ್ಡಿಯುಂಟಾಗಿದೆ.

ವಾಣಿಜ್ಯ ಬ್ಯಾಂಕ್ ಸ್ಥಾಪನೆಗೆ ಅಥವಾ ಬ್ಯಾಂಕ್ ಶಾಖೆಗಳನ್ನು ತೆರೆಯಲು ಪರವಾನಗಿ ನೀಡುವ ರಿಸರ್ವ್ ಬ್ಯಾಂಕಿನ ಅಧಿಕಾರವನ್ನೇ ಸರ್ಕಾರ ವಹಿಸಿಕೊಳ್ಳುವುದೆಂಬ ಸುದ್ದಿಯೊಂದು ಪ್ರಕಟವಾಗಿತ್ತು. ಸರ್ಕಾರದ ಹಣಕಾಸು ಇಲಾಖೆಯಲ್ಲಿ ಇಂಥ ಅಧಿಕಾರ ಕೇಂದ್ರೀಕೃತವಾಗುವುದು ಸರ್ವಥಾ ಸರಿಯಲ್ಲ. ರಿಸರ್ವ್ ಬ್ಯಾಂಕಿನಂಥ ಸ್ವಾಯತ್ತ ಪರಿಣತ ಸಂಸ್ಥೆಯಲ್ಲಿ ಇದು ನಿಹಿತವಾಗಿರುವುದು ಎಲ್ಲ ದೃಷ್ಟಿಗಳಿಂದಲೂ ಯುಕ್ತವಾದ್ದು. ಸುದೈವದಿಂದ ಸರ್ಕಾರ ತನ್ನ ಈ ಯೋಚನೆಯನ್ನು ಈಚೆಗೆ ಬಿಟ್ಟುಕೊಟ್ಟಿದೆಯೆಂದೂ, ರಿಸರ್ವ್ ಬ್ಯಾಂಕಿನ ಕೈಯಲ್ಲೇ ಈ ಅಧಿಕಾರ ಮುಂದುವರಿಯುವುದೆಂದೂ ತಿಳಿದುಬಂದಿದೆ. ಈ ವಿವೇಕ ಮೂಡಿರುವುದು ಸ್ವಾಗತಾರ್ಹ. ಸರ್ಕಾರ ಘೋಷಿಸಿರುವ ಕೈಗಾರಿಕಾ ನೀತಿಯ ರೀತಿಯಲ್ಲಿ ವ್ಯಾಪಕ ಬ್ಯಾಂಕಿಂಗ್ ನೀತಿಯೊಂದನ್ನು ಘೋಷಿಸಿಲ್ಲದಿರುವುದು ಒಂದು ಲೋಪ. ಸರ್ಕಾರದ ಬ್ಯಾಂಕಿಂಗ್ ನೀತಿಯ ಉದ್ದೇಶ, ವಿವಿಧ ಸಂಸ್ಥೆಗಳ ಅಧಿಕಾರ ಹಾಗೂ ಕಾರ್ಯಭಾರಗಳು ಇವನ್ನೆಲ್ಲ ವ್ಯಾಖ್ಯಾನಿಸುವುದು ಅತ್ಯಗತ್ಯ.

### ಬ್ಯಾಂಕಿಂಗ್ ಕಾನೂನುಗಳ ತಿದ್ದುಪಡಿ ವಿಧೇಯಕ

ಸರ್ಕಾರ ಈಚೆಗೆ ಲೋಕಸಭೆಯ ಮುಂದೆ ಬ್ಯಾಂಕಿಂಗ್ ಕಾನೂನುಗಳ ತಿದ್ದುಪಡಿ ವಿಧೇಯಕವೊಂದನ್ನು ಮಂಡಿಸಿದೆ. ೧೯೮೩ರ ಈ ವಿಧೇಯಕ ಇಷ್ಟರಲ್ಲೇ ಪರಿಶೀಲನೆಗೆ ಬರಲಿದೆಯೆಂದು ಹೇಳಲಾಗಿದೆ. ಕೇಂದ್ರದಲ್ಲಿ ಜನತಾ ಸರ್ಕಾರ ಅಧಿಕಾರದಲ್ಲಿದ್ದ ಕಾಲದಲ್ಲಿ ೧೯೭೮ ರಲ್ಲಿ ಇಂಥ ವಿಧೇಯಕವೊಂದನ್ನು ಮಂಡಿಸಲಾಗಿತ್ತು. ಆದರೆ ಅದಕ್ಕೆ

ಬಹಳಷ್ಟು ವಿರೋಧ ಬಂದುದರಿಂದ ಅದನ್ನು ಕೈಬಿಡಲಾಯಿತೆಂದು ಕಾಣುತ್ತದೆ. ಅಥವಾ ಕಾಲಾನುಕ್ರಮದಲ್ಲಿ ತಾನಾಗಿಯೇ ವ್ಯಪಗತಗೊಳ್ಳಲು ಲ್ಯಾಪ್ಸ್ ಬಿಟ್ಟಿರಬಹುದು. ಆದರೆ ಈಗ ಬಹುತೇಕ ಅಂಥದೇ ವಿಧೇಯಕವನ್ನು ಈಗಿನ ಸರ್ಕಾರ ತಂದಿದೆ. ೧೯೩೪ರ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, ೧೯೪೯ರ ಬ್ಯಾಂಕಿಂಗ್ ನಿಬಂಧನ (ರೆಗ್ಯುಲೇಷನ್) ಅಧಿನಿಯಮ, ೧೯೫೫ರ ಭಾರತೀಯ ಸ್ಟೇಟ್ ಬ್ಯಾಂಕ್ ಅಧಿನಿಯಮ ೧೯೭೦ ಮತ್ತು ೧೯೮೦ರ ಬ್ಯಾಂಕ್ ರಾಷ್ಟ್ರೀಕರಣ ಅಧಿನಿಯಮಗಳು ಇವೂ ಒಳಗೊಂಡಂತೆ ಒಂಬತ್ತು ಪ್ರಸಕ್ತ ಅಧಿನಿಯಮಗಳನ್ನು ತಿದ್ದುಪಡಿ ಮಾಡುವುದು ಈ ವಿಧೇಯಕದ ಉದ್ದೇಶ. ಏಕರೂಪತೆಯ ದೃಷ್ಟಿಯಿಂದ ಇದು ನ್ಯಾಯವಾದ್ದೇ. ದೇಶದ ವಿಚಾರವಂತರು ಇದನ್ನು ಕೂಲಂಕಷವಾಗಿ ಪರಿಶೀಲಿಸಿ ಯುಕ್ತ ಸಲಹೆಗಳನ್ನು ನೀಡಬೇಕು.

ಪ್ರಸಕ್ತ ವಿಧೇಯಕದಲ್ಲಿ ವಾಣಿಜ್ಯ ವಲಯಗಳ ವಿಶೇಷವಾದ ಟೀಕೆಗೆ ಗುರಿಯಾಗಿರುವ ಭಾಗವೆಂದರೆ ೧೧ನೆಯ ಖಂಡ (ಕ್ಲಾಸ್). ೧೯೩೪ರ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮಕ್ಕೆ ಹೊಸದೊಂದು ಅಧ್ಯಾಯವನ್ನು (ಅಧ್ಯಾಯ III C) ಸೇರಿಸುವುದು ಈ ಖಂಡದ ಉದ್ದೇಶ. ಇದರಲ್ಲಿ ೪೫ R, ೪೫S, ೪೫T ಎಂಬ ಮೂರು ಹೊಸ ಪ್ರಕರಣಗಳು ಇರುತ್ತವೆ. ಅನಿಗಮಿತ (ಅನ್-ಇನ್ಕಾರ್ಪೊರೇಟೆಡ್) ಕಾಯಗಳು (ಬಾಡೀಸ್) ಠೇವಣಿಗಳನ್ನು ಸ್ವೀಕರಿಸುವ ಬಗ್ಗೆ ನಿರ್ಬಂಧ ನಿಷೇಧಗಳನ್ನು ಈ ಪ್ರಕರಣಗಳು ವಿಧಿಸುತ್ತವೆ. ಠೇವಣಿಗಳ ವ್ಯಾಖ್ಯೆ ಇವನ್ನು ಸ್ವೀಕರಿಸುವ ಬಗೆಗೆ ವಿಧೇಯಕದಲ್ಲಿ ಸೂಚಿಸಲಾಗಿರುವ ಉಪಬಂಧಗಳು ಇವು ರಾಷ್ಟ್ರದ ಪ್ರಜೆಗಳು ಸ್ವತಂತ್ರವಾಗಿ ಅಬಾಧಿತವಾಗಿ ನ್ಯಾಯಬದ್ಧವಾದ ಆರ್ಥಿಕ ಚಟುವಟಿಕೆಗಳನ್ನು ಕೈಗೊಳ್ಳಲು ಅಡ್ಡಿಯುಂಟು ಮಾಡುತ್ತವೆಂದೂ, ಭಾರತದ ಸಂವಿಧಾನದ ಅನುಚ್ಛೇದ ೧೯-೧-g ಗೆ ವ್ಯತಿರಿಕ್ತ ವಾಗಿವೆಯೆಂದೂ ವಾದಿಸಲಾಗಿದೆ. ಖಾಸಗಿ ವಲಯಕ್ಕೆ ಧನ ಪೋಷಣೆಯ ಪರ್ಯಾಯ ವ್ಯವಸ್ಥೆಯೊಂದು ಅಲಭ್ಯವಾಗಿರುವಲ್ಲಿ ಇಂಥ ನಿರ್ಬಂಧಗಳಿಂದ ಆರ್ಥಿಕ ಬೆಳವಣಿಗೆಗೆ ಧಕ್ಕೆ ಉಂಟಾಗುವುದೆಂದೂ ವಾದಿಸಲಾಗಿದೆ. ವಿಧೇಯಕದ ಉದ್ದೇಶಗಳು ಅಷ್ಟೇನೂ ಸ್ಪಷ್ಟವಾಗಿಲ್ಲವೆಂದು ಕೂಡ ಹೇಳಲಾಗಿದೆ. ಠೇವಣಿದಾರರ ಹಿತರಕ್ಷಣೆ, ಆರ್ಥಿಕ ಚಟುವಟಿಗಳಿಗೆ ಪ್ರೋತ್ಸಾಹ ಇವೆರಡನ್ನೂ ಅನುಲಕ್ಷಿಸುವ ರೀತಿಯಲ್ಲಿ ಈ ತಿದ್ದುಪಡಿ ವಿಧೇಯಕ ಅಂತಿಮವಾಗಿ ರೂಪುಗೊಳ್ಳುವುದೆಂದು ಆಶಿಸಬಹುದಾಗಿದೆ.

**ಈ ಸಂಚಿಕೆಯಲ್ಲಿ**

ಬ್ಯಾಂಕಿಂಗ್ ಪ್ರಪಂಚದ ನಾಲ್ಕನೆಯ ವರ್ಷದ ಎರಡನೆಯ ಸಂಚಿಕೆ ಎಂದಿನಂತೆ ಉತ್ತಮ ಮಟ್ಟದ ಹಾಗೂ ಉಪಯುಕ್ತವಾದ ಲೇಖನಗಳನ್ನು ಒಳಗೊಳ್ಳುವಂತೆ ಮನಃಪೂರ್ವಕವಾಗಿ ಶ್ರಮಿಸಲಾಗಿದೆಯೆಂದು ನಮ್ಮ ನಂಬಿಕೆ. ತರುಣ ಲೇಖಕರ ಸಮರ್ಥ ಪಡೆಯೊಂದನ್ನು ನಿರ್ಮಿಸಲು ಬ್ಯಾಂಕಿಂಗ್ ಪ್ರಪಂಚ ಸದಾ ಪ್ರಯತ್ನಶೀಲವಾಗಿದೆ. ಸಮನ್ವಯ ಸಮಿತಿಯ ಆಶ್ರಯದಲ್ಲಿ ಪ್ರತಿ ಆರು ತಿಂಗಳುಗಳಿಗೆ ಒಮ್ಮೆ ಏರ್ಪಡಿಸಲಾಗುತ್ತಿರುವ ಬ್ಯಾಂಕಿಂಗ್ ಕನ್ನಡ ಕಮ್ಮಟಗಳು ಬಹಳ ಉಪಯುಕ್ತವೆನಿಸಿವೆ. ಹಿಂದಿನ ಸಂಚಿಕೆಯಲ್ಲಿ ತಿಳಿಸಿದ್ದಂತೆ ಕಳೆದ ಏಪ್ರಿಲ್‌ನಲ್ಲಿ ಶಿರಸಿಯಲ್ಲಿ ಆರು ದಿನಗಳ ಕಾಲ ಮೂರನೆಯ ಕಮ್ಮಟ ನಡೆಯಿತು. ಇದನ್ನು ಕುರಿತ ವಿವರವಾದ ವರದಿ ಕಳೆದ ಸಂಚಿಕೆಯಲ್ಲಿ ಪ್ರಕಟವಾಗಿವೆ. ಯಾವುದೇ ವಿಷಯವನ್ನು ಕುರಿತ ಅಭ್ಯಾಸಪೂರ್ಣ ಲೇಖನಗಳನ್ನು ಕನ್ನಡದಲ್ಲಿ ಬರೆಯಬಲ್ಲ ಸಾಮರ್ಥ್ಯವನ್ನು ಕಮ್ಮಟದ ಭಾಗಿಗಳು ಪಡೆದುಕೊಂಡಿದ್ದಾರೆಂಬುದು ಸಮಾಧಾನದ ಸಂಗತಿ. ಪಾರಿಭಾಷಿಕ ಪದಗಳ ಸೃಷ್ಟಿ, ಭಾಷಾಂತರದ ತಂತ್ರ ಇವನ್ನು ಕುರಿತ ಪ್ರಾಯೋಗಿಕ ಜ್ಞಾನವನ್ನು ಸಾಧಿಸುವಲ್ಲಿಯೂ ಕಮ್ಮಟ ಯಶಸ್ವಿಯಾಗಿದೆ. ಕಮ್ಮಟದ ಭಾಗಿಗಳ ಉತ್ಸಾಹ ಶ್ರದ್ಧೆಗಳು ಪ್ರಶಂಸಾರ್ಹ. ಇವರು ಬ್ಯಾಂಕಿಂಗ್ ಪ್ರಪಂಚದ ಮಿದುಳಾಗಿ, ಬೆನ್ನೆಲುಬಾಗಿ, ಶಾಶ್ವತ ಬರಹಗಾರರಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ಇವರನ್ನು ಬ್ಯಾಂಕಿಂಗ್ ಪ್ರಪಂಚ ಅಭಿನಂದಿಸುತ್ತದೆ. ಸಮನ್ವಯ ಸಮಿತಿಯ ಆಶ್ರಯದಲ್ಲಿ ನಾಲ್ಕನೆಯ ಕಮ್ಮಟ ನವೆಂಬರ್ ೧ ರಿಂದ ಆರು ದಿನಗಳ ಕಾಲ ಹೊಸಪೇಟೆಯಲ್ಲಿ ನಡೆಯಲಿದೆ. ಇದು ಕೂಡ ಯಶಸ್ವಿಯೂ ಉಪಯುಕ್ತವೂ ಆದೀತೆಂಬ ನಂಬಿಕೆ ನಮ್ಮದು.

ಸಮನ್ವಯ ಸಮಿತಿಯ ಕಮ್ಮಟದ ಯಶಸ್ಸಿನ ಕಂಪು ಸರ್ಕಾರಿ ವಲಯಕ್ಕೂ ಹಬ್ಬಿರುವುದು ಸಂತೋಷದ ಸಂಗತಿ. ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ವಿಭಾಗದ ವತಿಯಿಂದ ಬೆಂಗಳೂರಿನಲ್ಲಿ ಕಳೆದ ಮಾರ್ಚ್ ತಿಂಗಳಲ್ಲಿ ಇದೇ ಬಗೆಯ ಕಾರ್ಯ ಶಿಬಿರವೊಂದನ್ನು ಏರ್ಪಡಿಸಲಾಗಿತ್ತು. ಬೆಂಗಳೂರು ನಗರದ ವಿವಿಧ ಬ್ಯಾಂಕುಗಳಿಂದ ಬಂದಿದ್ದ ಅಧಿಕಾರಿಗಳ ಈ ಶಿಬಿರದ ಯಶಸ್ಸೂ ಗಮನಾರ್ಹ. ಇದೇ ಬಗೆಯ ಶಿಬಿರಗಳನ್ನು ರಾಜ್ಯದ ಇತರ ಸ್ಥಳಗಳಲ್ಲೂ ನಡೆಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕಾರ್ಯಕ್ರಮ ಹಾಕಿಕೊಂಡಿದೆ. ಇದರಿಂದ ಬ್ಯಾಂಕುಗಳಲ್ಲಿ ಕನ್ನಡದಲ್ಲಿ ವ್ಯವಹಾರ ನಡಸಲು ಅಗತ್ಯವಾದ ಪರಿಣತಿ ನಿರ್ಮಾಣಗೊಳ್ಳುತ್ತದೆ. ಬ್ಯಾಂಕಿಂಗ್ ವಿಷಯ ಕುರಿತು ಬರಹಗಾರರ ಸಂಖ್ಯೆಯೂ ಬೆಳೆಯುತ್ತದೆ. ಸರ್ಕಾರಿ ಕಮ್ಮಟದಲ್ಲಿ ಮಂಡಿಸಲಾದ ಕೆಲವು ಪ್ರಬಂಧಗಳನ್ನೂ ಭಾಷಾಂತರಿಸಲಾದ ಲೇಖನವೊಂದನ್ನೂ ಬ್ಯಾಂಕಿಂಗ್ ಪ್ರಪಂಚದ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಗದ್ದಲವಿಲ್ಲದ ಈ ಕ್ರಾಂತಿಯನ್ನು ರೂಪಿಸುವಲ್ಲಿ ಬ್ಯಾಂಕಿಂಗ್ ಪ್ರಪಂಚ ಪ್ರಮುಖ ಪಾತ್ರ ವಹಿಸುತ್ತಿದೆಯೆಂಬುದು ಅಭಿಮಾನದ ಸಂಗತಿ. ●

– ಸಂಪಾದಕೀಯ

ಬ್ಯಾಂಕಿಂಗ್ ಪ್ರಪಂಚ, ಅಕ್ಟೋಬರ್ ೧೯೮೩

# ಕನ್ನಡವ ಕಾಪಿಡಲು ಸಂಕಲ್ಪ ಬೋಧಿಸಯ್ಯ

ಬ್ಯಾಂಕಿಂಗ್ ಪ್ರಪಂಚದ ಎಂಟನೆಯ ಸಂಪುಟದ ಮೊದಲ ಸಂಚಿಕೆಯನ್ನು ನಿಮ್ಮ ಕೈಯಲ್ಲಿಡುತ್ತಿದ್ದೇವೆ. ಏಳು ವರ್ಷಗಳ ಹಿಂದೆ ಅರ್ಧ ವಾರ್ಷಿಕವಾಗಿ ಆರಂಭವಾದ ಈ ಪತ್ರಿಕೆ ಕಳೆದ ವರ್ಷದಿಂದ ತ್ರೈಮಾಸಿಕವಾಗಿ ಹೊರ ಬರುತ್ತಿದೆ. ಇಂಥ ಪತ್ರಿಕೆಯೊಂದನ್ನು ಹೊರತರುವುದರ ಕಷ್ಟಗಳೇನೇಬುದರ ಅನುಭವದೊಂದಿಗೆ ನಮಗೆ ಹೆಮ್ಮೆಯೂ ಆಗುತ್ತಿದೆ. ಬೇರಾವ ಭಾರತೀಯ ಭಾಷೆಯಲ್ಲೂ ಹಣ-ಬ್ಯಾಂಕಿಂಗ್ ವಿಚಾರಗಳಿಗೆಂದೇ ಮೀಸಲಾದ ಪತ್ರಿಕೆ ಇಲ್ಲವೆಂಬುದೇ ನಮಗೆ ಹೆಚ್ಚಿನ ಹೆಮ್ಮೆಯ ಸಂಗತಿ. ಈ ಬಗೆಯ ಪತ್ರಿಕೆ ಏಳು ವರ್ಷಗಳನ್ನು ದಾಟಿ ಮುನ್ನಡೆದಿದೆಯೆಂಬುದೂ ಹೆಮ್ಮೆಗೆ ಕಾರಣ. ಇಂಥ ಪ್ರಯತ್ನಗಳಿಗೆ ಕನ್ನಡಿಗರಿಂದ ಎಂಥ ಸ್ವಾಗತ ಪುರಸ್ಕಾರಗಳು ದೊರಕುವುವೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಈಚೆಗೆ ತಮ್ಮ ತುಂಬು ವಯಸ್ಸಿನಲ್ಲಿ ತೀರಿಕೊಂಡ ಡಾ. ಎಸ್.ವಿ. ರಂಗಣ್ಣ ಅವರು ಕನ್ನಡಿಗರ ಸ್ವಭಾವವನ್ನು ವಚನವೊಂದರಲ್ಲಿ ಬಹಳ ಚೆನ್ನಾಗಿ ಹೀಗೆ ಬಣ್ಣಿಸಿದ್ದಾರೆ - ಕರ್ನಾಟ ಜನಪದವಿಂದು ನರಿಬಳಗ, ಕುರಿಮಂದೆ, ಹೆಬ್ಬಾವು ಸಂಸಾರ, ಎಮ್ಮೆದೊಡ್ಡಿ, ತಟ್ಟುಕೊಟ್ಟಿಗೆ, ಇರುವೆ ಗೂಡು, ನೋಡಯ್ಯ : ಎಲ್ಲರನು ಎಲ್ಲವನು ಎಚ್ಚರಿಸಿ ಇದಿರು ನಿಲ್ಲಿಸಿಕೊಂಡು ನಿಯಮಗಳ ವಿಧಿಸಯ್ಯ, ಕನ್ನಡಿಗರು ಇಂದು ಅಭಿಮಾನ ಶೂನ್ಯರಾಗಿದ್ದಾರೆ ಎಂದು ಸಾಧಿಸಲು ಪುರಾವೆಗಳನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಬ್ಯಾಂಕಿಂಗ್ ಪ್ರಪಂಚದಂಥ ಪತ್ರಿಕೆಯನ್ನು ಹೊರಡಿಸಲು ಬೆಟ್ಟಕ್ಕೆ ಕಲ್ಲು ಹೊರುವಷ್ಟು ಪ್ರಯಾಸ ಪಡಬೇಕಾಗುತ್ತಿರಲಿಲ್ಲ. ಇದರ ಉಪಯುಕ್ತತೆಯನ್ನು ಅರಿಯಲಾರದಷ್ಟು ದಡ್ಡರೇನೂ ಕನ್ನಡಿಗರಲ್ಲ. ಆದರೆ ಅರಿಯುವ ಮನಸ್ಸು ಇಲ್ಲ. ಅಧಿಕಾರಶಾಹಿಯಲ್ಲಿ ಮೇಲಿನಿಂದ ಆಜ್ಞಾ ರೂಪದಲ್ಲಿ ಬಂದದ್ದಕ್ಕೆ ಮಾತ್ರವೇ ಪುರಸ್ಕಾರ. ಮೇಲಿನವರು ಈ ಪತ್ರಿಕೆಯ ಬಗ್ಗೆ ಅಂಥ ಆಜ್ಞೆ ಹೊರಡಿಸುವುದರಿಂದ ಅವರಿಗೆ ಪ್ರಯೋಜನವಾದರೂ ಏನು? ಇಂಥ ಪರಿಸ್ಥಿತಿ ನಾಡಿಗೆ ಒಳ್ಳೆಯದಲ್ಲ.

## ಧನ್ಯವಾದ

ಆದರೆ ಬ್ಯಾಂಕಿಂಗ್ ಪತ್ರಿಕೆ ಈ ಪರಿಸ್ಥಿತಿಯಿಂದಾಗಿ ನಿಲ್ಲುವುದಿಲ್ಲ. ಕನ್ನಡದಲ್ಲಿ ಆಸಕ್ತಿ ಇರುವವರ ಸಂಖ್ಯೆ ಎಷ್ಟೇ ಅಲ್ಪವಾದರೂ ಅವರ ಸಂಕಲ್ಪ ಶಕ್ತಿ ಅಲ್ಪವಲ್ಲ. ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುಹೋದೆನೆಂದರೆ ತನುವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇವೆಲ್ಲಕ್ಕಂಜದಿದ್ದಡೆ ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ, ಎಂಬ ಬಸವಣ್ಣನವರ ವಚನ ಸುಳ್ಳಲ್ಲ. ತನುಮನ ಧನಗಳನ್ನೂ ಅರ್ಪಿಸಲು ಸಿದ್ಧವಾದ ಇಂಥ ಉತ್ಸಾಹಿಗಳ ತಂಡ ಇದರ ಬೆಂಗಡೆಯಲ್ಲಿ ನಿಂತಿದೆಯಾದ್ದರಿಂದ ಇದು ಮುಂದುವರಿದೇ ತೀರುತ್ತದೆ. ಬ್ಯಾಂಕಿಂಗ್ ಪ್ರಪಂಚದಿಂದಾಗಿ ಇಂದು ಈ ವಿಚಾರವನ್ನು ಕುರಿತು ಕನ್ನಡದಲ್ಲಿ ಸಮರ್ಥವಾಗಿ ಬರೆಯಬಲ್ಲವರ ಪಡೆಯೊಂದು ನಿರ್ಮಿತವಾಗಿದೆ. ಬ್ಯಾಂಕಿಂಗ್ ಪ್ರಪಂಚ ಆರ್ಥಿಕವಾಗಿ ಕಂಗೆಡದಂತೆ ಅನೇಕ ಉದ್ಯಮ ಸಂಸ್ಥೆಗಳು ಜಾಹೀರಾತುಗಳನ್ನು ನೀಡಿ ಪ್ರೋತ್ಸಾಹಿಸುತ್ತಿವೆ. ಇದರ ಚಂದಾದಾರರ ಸಂಖ್ಯೆಯೂ ನಿಧಾನವಾಗಿ ಬೆಳೆಯುತ್ತಿದೆ. ಈ ಪತ್ರಿಕೆಯ ಮುದ್ರಕರಂತೂ ಇದು ತಮ್ಮದೇ ಪ್ರಕಾಶನವೆಂಬ ರೀತಿಯಲ್ಲಿ ಇದರ ವಿನ್ಯಾಸವನ್ನು ಉತ್ತಮಪಡಿಸುವುದರಲ್ಲಿ ವಿಶೇಷವಾದ ಆಸ್ಥೆ ವಹಿಸುತ್ತಿಸದ್ದಾರೆ. ಇವರೆಲ್ಲರ ಬೆಂಬಲಕ್ಕಾಗಿ ಬ್ಯಾಂಕಿಂಗ್ ಪ್ರಪಂಚ ಧನ್ಯವಾದ ಅರ್ಪಿಸುತ್ತಿದೆ.

## ಆತ್ಮವಂಚನೆ - ಪರವಂಚನೆ

ಕರ್ನಾಟಕ ರಾಜ್ಯ ಅಖಿಲ ಭಾರತ ಖ್ಯಾತಿಯ ಅನೇಕ ಬ್ಯಾಂಕಿಂಗ್ ಸಂಸ್ಥೆಗಳ ತವರು. ಬೇರಾವ ರಾಜ್ಯದಲ್ಲೂ ಕರ್ನಾಟಕದಲ್ಲಿ ಹುಟ್ಟಿದಷ್ಟು ಸಂಖ್ಯೆಯಲ್ಲಿ ಬ್ಯಾಂಕುಗಳು ಹುಟ್ಟಲಿಲ್ಲ. ಆದರೆ ಕನ್ನಡದ ಮಾತು ಬಂದಾಗ ಕರ್ನಾಟಕದಲ್ಲಿ ಹುಟ್ಟಿದ ಬ್ಯಾಂಕುಗಳೇ ಉಳಿದ ಬ್ಯಾಂಕುಗಳಿಗಿಂತ ತಾತ್ಸಾರದ ಧೋರಣೆ ತಳೆಯುತ್ತಿವೆ. ಹಿಂದಿ ನಮ್ಮ ಒಕ್ಕೂಟ ಸರ್ಕಾರದ ಭಾಷೆ ನಿಜ. ವಿವಿಧ ರಾಜ್ಯಗಳ ನಡುವೆ ಸಂಪರ್ಕ ಸಾಧನೆಯ ದೃಷ್ಟಿಯಿಂದ ಕ್ರಮೇಣ ಹಿಂದಿಯ ಬಳಕೆಯ ತರ್ಕಬದ್ಧತೆಯನ್ನು ಎತ್ತಿ ಹಿಡಿಯುವವರನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ಕನ್ನಡಕ್ಕೆ ನ್ಯಾಯವಾಗಿ ದೊರಕಬೇಕಾದ ಸ್ಥಾನವನ್ನು ಚ್ಯುತಿಗೊಳಿಸಿ ಅಲ್ಲಿ ಹಿಂದಿಯನ್ನು ಸ್ಥಾಪಿಸುವುದು ಸರಿಯೆನಿಸುವುದಿಲ್ಲ. ಪ್ರತಿಯೊಂದು ರಾಜ್ಯದಲ್ಲೂ ಬ್ಯಾಂಕಿಂಗ್ ಕಛೇರಿಗಳು ಅಲ್ಲಿಯ ಜನರ ಭಾಷೆಯಲ್ಲೇ ವ್ಯವಹರಿಸಬೇಕೆಂಬ ತತ್ವವನ್ನು ಮಾನ್ಯ ಮಾಡದಿದ್ದರೆ ಅದರಿಂದ ಬ್ಯಾಂಕುಗಳು ತಮ್ಮ ಘನೋದ್ದೇಶವನ್ನು ಸಾಧಿಸಲಾಗದೆ ವಿಫಲಗೊಳ್ಳುವುದು ಸ್ವತಸ್ಸಿದ್ಧ. ಹಿಂದಿಯನ್ನು ಮುಂದೆ ತರುವ ಉತ್ಸಾಹದಲ್ಲಿ ನಮ್ಮ ರಾಜ್ಯದ ಹಲವು ಬ್ಯಾಂಕಿಗಳು ಕನ್ನಡವನ್ನು ತುಳಿಯಹತ್ತಿವೆ. ಕನ್ನಡದಲ್ಲಿ ವ್ಯವಹಾರ ಮಾಡುವ ಮಾತೆತ್ತುವುದೂ ರಾಷ್ಟ್ರದ್ರೋಹ ಎಂಬ ರೀತಿಯಲ್ಲಿ ಕೆಲವರು ವರ್ತಿಸುತ್ತಿದ್ದಾರೆ. ಕನ್ನಡವನ್ನು ಪುರಸ್ಕರಿಸಿದರೆ ತಮ್ಮ ಪದೋನ್ನತಿಗೆ ಧಕ್ಕೆ ಬಂದೀತೆಂಬ ಭಯ ಅನೇಕರಿಗೆ. ಇಂಥವರು ನಿಜಕ್ಕೂ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದಾರೆ, ಜನರನ್ನು ವಂಚಿಸುತ್ತಿದ್ದಾರೆ ಎಂದು ಎಚ್ಚರಿಸದೆ ವಿಧಿಯಿಲ್ಲ.

## ಭಾಷಾ ಪ್ರೇಮದ ವೈಖರಿ

ಕೆಲವು ದಿನಗಳ ಹಿಂದೆ ಕರ್ನಾಟಕದಲ್ಲಿ ಸ್ಥಾಪಿತವಾದ ಬ್ಯಾಂಕೊಂದರ ಮುಖ್ಯರ ನಿವೃತ್ತಿಯ ಸಂದರ್ಭದಲ್ಲಿ ಅವರಿಗೆ ಬೀಳ್ಕೊಡುಗೆಯ ಸಮಾರಂಭವೊಂದು ಏರ್ಪಾಡಾಗಿತ್ತು. ಅಚ್ಚ ಕನ್ನಡದ ಊರೊಂದರಲ್ಲಿ ಕನ್ನಡಿಗರೇ ಇದ್ದ ಆ ಸಭೆಯಲ್ಲಿ ಮಾತಾಡಿದವರೆಲ್ಲರೂ ಕನ್ನಡಿಗರೇ. ಆದರೆ ಮಾತಾಡಿದ್ದು ಇಂಗ್ಲೀಷಿನಲ್ಲೇ. ಅದೂ ತಪ್ಪು ತಪ್ಪಾಗಿ. ಕನ್ನಡಿಗರಲ್ಲದ ಒಬ್ಬರು ಬಂಗಾಲಿ. ಅವರೂ ಬ್ಯಾಂಕ್ ಅಧಿಕಾರಿಯೇ. ಅವರು ಇಂಗ್ಲೀಷಿನಲ್ಲೇ ಮಾತಾಡುವುದು ಅನಿವಾರ್ಯವಾಗಿತ್ತು. ಆದರೆ ಉಳಿದ ಎಲ್ಲರೂ ಕನ್ನಡದಲ್ಲಿ ಮಾತಾಡದಿದ್ದುದು ಅವರಿಗೆ ಆಶ್ಚರ್ಯವಾಗಿತ್ತು. ತಮ್ಮ ರಾಜ್ಯದಲ್ಲಿ ಹೀಗಾಗುತ್ತಿರಲಿಲ್ಲ ಎಂದು ಅವರು ಹೇಳಿದರು. ಅವರ ಅನಂತರ ಮಾತಾಡಿದವರು ತಾವು ಕನ್ನಡಿಗರಾದರೂ ಕನ್ನಡದಲ್ಲಿ ಮಾತಾಡಿ ಅಭ್ಯಾಸ ಇಲ್ಲವೆಂದು ಹೇಳಿ ಅವರೂ ಇಂಗ್ಲೀಷಿನಲ್ಲೇ ಭಾಷಣ ಮಾಡಲು ತೊಡಗಿದರು. ಇದು ಕರ್ನಾಟಕದಲ್ಲಿರುವ ಬ್ಯಾಂಕುಗಳ ಅನೇಕ ಕನ್ನಡಿಗ ಅಧಿಕಾರಿಗಳ ಭಾಷಾಪ್ರೇಮದ ವೈಖರಿ. ಇದು ನಮ್ಮ ಪತ್ರಿಕೆಯೊಂದರಲ್ಲಿ ವರದಿಯಾಗಿತ್ತು. ಇಂಥ ಭ್ರಮಾಲೋಕದಲ್ಲಿ ವಿಹರಿಸುತ್ತಿರುವ ಬ್ಯಾಂಕ್ ಅಧಿಕಾರಿಗಳು ಎಚ್ಚತ್ತುಕೊಳ್ಳದಿದ್ದರೆ ಅವರಿಂದ ನಾಡಿಗೂ ತಮಗೂ ಪ್ರಮಾದವೇ ತಟ್ಟುತ್ತದೆ. ಹೀಗಾಗಬಾರದು.

## ಕರ್ತವ್ಯವೇನು?

ಹಾಗಾದರೆ ಕನ್ನಡಿಗರ ಕರ್ತವ್ಯವೇನು? ಎಸ್.ವಿ. ರಂಗಣ್ಣನವರೇ ಹೀಗೆಂದು ಹೇಳಿದ್ದಾರೆ. ಈಗ ಯಾವುದು ಏನೆ ಎಷ್ಟು ಕನ್ನಡಿಗರ ಕರ್ತವ್ಯ ರಂಗೇಶ? ಏಳನೆಯ ಮಾಸದಲಿ ಬಸುರಿ ಬಲಬಾಹುವಿಗೆ ಕನ್ನಡ ರಕ್ಷೆ ಕಟ್ಟತಕ್ಕದ್ದು. ಶಿಶು ಜನಿಸಿದೊಡನೆ ತಿನ್ನಿಸುವ ಬಜೆ ಬೆಣ್ಣೆಯ ಜೊತೆಗೆ ಕನ್ನಡವ ಬೆರಸುವುದು ಮರೆಯಬಾರದು. ಅನ್ಯಭಾಷೆಯ ಅತ್ಯಧಿಕ ಮೋಹವೆನ್ನುವ ಅಂಟುಜಾಡ್ಯ ಸೋಂಕದಿರಲು ಆರು ತಿಂಗಳು ತೀರುವುದರೊಳಗೆ ಕನ್ನಡ ಸಿಡುಬು ಹಾಕಿಸಬೇಕು. ತರುವಾಯ ಸಮ ಸಂವತ್ಸರ ನಡೆಯುವಾಗ ಕತ್ತರಿಸಲಯ್ಯ ಕನ್ನಡಕ್ಕೆ ಮುಡಿಯ. ಓನಾಮ ಹಬ್ಬಕ್ಕೆ ಅರ್ಚನಾ ಮೂರ್ತಿ ಆಗಲಿ ಕನ್ನಡದಿಂದ ತಯಾರಿಸಿದ ಸಿದ್ಧಿ ವಿನಾಯಕ. ವಿದ್ಯಾಭ್ಯಾಸ ಜರುಗತಕ್ಕದ್ದೂ ಕನ್ನಡ ಹಲಗೆ ಬಳಕ ಬಾಲಬೋಧೆ ಮಗ್ಗಿಕೋಷ್ಟಕ ಪಾಠ ಪುಸ್ತಕಗಳ ಮೂಲಕ. ಉಪನಯನ,ಶಿವದೀಕ್ಷೆ ಇತ್ಯಾದಿಗಳಲ್ಲಿ ಕನ್ನಡ ಪರಿಕರ ಕನ್ನಡ ಮಂತ್ರ ಕನ್ನಡ ಶೃಂಗಾರ. ಮದುವೆಯಲಿ ಕನ್ನಡ ಭಾಷಿಂಗ ಕನ್ನಡ ಸಂಕಲಿಕೆ ಧೋತ್ರ ಸೀರಿ. ಆಮೇಲೆ ಮನೆ ಕಟ್ಟತಕ್ಕದ್ದು ಕನ್ನಡ ಇಟ್ಟಿಗೆ ದೂಲ ಹೆಂಚುಗಳಿಂದ ಮಾಳಿಗೆ ಮೇಲೆ ಹಾರಿಸಬೇಕು ಕನ್ನಡ ಬಾವುಟವ. ದಿನದಿನವು ಕನ್ನಡ ಆಹಾರ ಕನ್ನಡ ವಿಹಾರಕನ್ನಡ ನಿದ್ದೆ ಎದ್ದೊಡನೆ ಕನ್ನಡ ಸ್ಮರಣೆ ಮಧ್ಯಾಹ್ನ ಕನ್ನಡ ಪೂಜೆ, ಸದಾ ಕನ್ನಡ ಧ್ಯಾನ, ಚಿಂತೆ, ಹಂಗು. ಆ ನಾಡು ಈ ನಾಡು ನುಡಿಗಳೆಲ್ಲ ವಿಧೇಯ ದಾಸದಾಸಿಯರಾಗಿ ಓಡಾಡಿ ಗೆಯ್ಮೆ ಗೈದು ತಂದು ತುಂಬಿಸಲಿ ಕನ್ನಡದ ಉಗ್ರಾಣವನ್ನು ಕನ್ನಡ ಸಿರಿಗನ್ನಡವಾಗಿ ಗೆದ್ದು ನಿಲ್ಲಲಿ.

ಅಂತೆಯೇ ಕರ್ನಾಟಕದಲ್ಲಿ ಬ್ಯಾಂಕ್ ಸೇವೆಗೆ ಸೇರಿದವರೆಲ್ಲ ಕನ್ನಡದಲ್ಲೇ ವ್ಯವಹರಿಸಲಿ. ಪ್ರೊಬೇಷನರಿಯಲ್ಲಿ ಕನ್ನಡ ರಕ್ಷೆ ಕಟ್ಟತಕ್ಕದ್ದು. ಸ್ಥಿರೀಕರಿಸುವ ಆಜ್ಞೆ, ಉತ್ತರ ಕನ್ನಡದಲ್ಲಿ. ಚೆಕ್ಕು ಚಲನ್ನು ಡ್ರಾಫ್ಟುಗಳು ಕನ್ನಡದಲ್ಲಿ – ಕನ್ನಡದಲ್ಲೂ – ನಲಿಯಲಿ. ವಹಿವಾಟು ಲೆಕ್ಕಗಳ ಋಣ ಧನಗಳ ರಿಂಗಣ ಗುಣಿತವಾಗಲಿ ಕನ್ನಡದಲ್ಲಿ. ಚರ್ಚೆ ವಿವರಣೆ ವರದಿ ಅರ್ಜಿ ಪುರಸ್ಕಾರ ನವೀಕರಣವೆಲ್ಲವೂ ಕನ್ನಡದಲ್ಲಾದರೆ ಏಕಾದೀತು ನಿಯಮಬಾಹಿರ? ನಿಯಮ ನಿಬಂಧನೆಗಳೂ ಕನ್ನಡದಲ್ಲೇ ಇದ್ದರೆ ಎಲ್ಲರಿಗೂ ಅರ್ಥವಾಗುವುವಲ್ಲವೆ? ಇನ್ನು ನಮೂನೆ ಕನ್ನಡದಲ್ಲೇ ಇದ್ದರೆ ಅರ್ಥವಾಗದೆಯೇ ರುಜು ಹಾಕುವ ಹವ್ಯಾಸ ನಿಂತೀತಲ್ಲವೆ?

*ಸಂಪಾದಕೀಯ*

*ಬ್ಯಾಂಕಿಂಗ್ ಪ್ರಪಂಚ – ಮಾರ್ಚ್, ೧೯೯೮*

# ಭಾರತದಲ್ಲಿ ವಿದ್ಯುನ್ಮಾನ ಬ್ಯಾಂಕಿಂಗು

**ಜಿ. ಎನ್. ನರಸಿಂಹಮೂರ್ತಿ**

ದಿಢೀರನೆ ಬಂದು ಭಾರತೀಯ ಬ್ಯಾಂಕುಗಳ ಬಾಗಿಲು ತಟ್ಟುತ್ತಿರುವ ವಿದ್ಯುನ್ಮಾನೀಯ ವಿದ್ಯಮಾನಗಳು ವರವೆ, ಶಾಪವೇ? ಎಪ್ಪತ್ತರ ದಶಕದಲ್ಲಿ ಪಾಶ್ಚಾತ್ಯ ಬ್ಯಾಂಕಿಂಗ್ ವಲಯದಲ್ಲಿ ಕ್ರಾಂತಿಸದೃಶ ಬದಲಾವಣೆಯನ್ನುಂಟುಮಾಡಿದ ವಿದ್ಯುನ್ಮಾನೀಯ ವಿದ್ಯಮಾನಗಳು ಎಂಬತ್ತರ ದಶಕದಲ್ಲಿ ದಿಢೀರನೆ ಬಂದು ಭಾರತೀಯ ಬ್ಯಾಂಕುಗಳ ಬಾಗಿಲು ತಟ್ಟುತ್ತಿವೆ. ಮನೆಯೊಡತಿ ಒಬ್ಬಳೇ ಮನೆಯಲ್ಲಿದ್ದಾಗ ಅಪರಿಚಿತ ಅತಿಥಿ ಬಂದು ಬಾಗಿಲು ತಟ್ಟಿದ ಹಾಗೆ. ಬಾಗಿಲನ್ನು ಒಮ್ಮೆಲೇ ತೆರೆಯಲಾಗದೇ ಕುತೂಹಲ, ಸೌಜನ್ಯಗಳನ್ನು ಬದಿಗಿರಿಸಿ ಬಾಗಿಲು ಹಾಕಲೂ ಆಗದು.

ಇದು ಸ್ಥೂಲವಾಗಿ ಭಾರತದ ಬ್ಯಾಂಕುಗಳು ವಿದ್ಯುನ್ಮಾನ ಯುಗವನ್ನು ಕಂಡುಕೊಳ್ಳುತ್ತಿರುವ ಪರಿ. ೨೧ನೆಯ ಶತಮಾನಕ್ಕೆ ದೇಶವನ್ನು ಒಯ್ಯುವ ನಮ್ಮ ನೇತಾರರ ದೃಢ ಸಂಕಲ್ಪದ ಹಿನ್ನೆಲೆಯಲ್ಲಿ ಗಮನಿಸಿದರೆ ಬ್ಯಾಂಕುಗಳು ಈ ಅತಿಥಿಯನ್ನು ಸ್ವಾಗತಿಸುವುದಷ್ಟೇ ಅಲ್ಲದೆ ತಮ್ಮ ಕ್ಷೇತ್ರದ ಒಂದು ಬಹು ಮುಖ್ಯ ಅನಿವಾರ್ಯ ಅಂಗವಾಗಿಸಿಕೊಳ್ಳಬೇಕಾಗಬಹುದು ಎನಿಸುತ್ತೆ. ಎಂದರೆ ಭಾರತೀಯ ಬ್ಯಾಂಕುಗಳು ಆಚೆ ಕಡೆಯ ವಿದ್ಯಮಾನಗಳನ್ನು ಗಮನಿಸುತ್ತಿರಲಿಲ್ಲವೆಂದಾಗಲಿ ಆಧುನಿಕ ವಿಧಾನಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಅಪೇಕ್ಷೆ ಪಡಲಿಲ್ಲವೆಂದಾಗಲಿ ಅಲ್ಲ. ವಿದ್ಯುನ್ಮಾನ ಶಾಸ್ತ್ರದ ಬೆಳವಣಿಗೆಯೊದಿಗೇ ಬೆಳೆದ ಮಾಹಿತಿ ತಂತ್ರಜ್ಞಾನವನ್ನೂ, ಬ್ಯಾಂಕಿಂಗಿನಲ್ಲಿ ಅವುಗಳ ಉಪಯುಕ್ತತೆಯನ್ನೂ ಭಾರತೀಯ ಬ್ಯಾಂಕುಗಳು ಅರವತ್ತರ ದಶಕದಲ್ಲಿಯೇ ಗಮನಿಸಿದ್ದುವು. ೧೯೬೬ರಷ್ಟು ಹಿಂದೆಯೇ ಅಖಿಲ ಭಾರತ ಬ್ಯಾಂಕ್ ಉದ್ಯೋಗಿಗಳ ಸಂಘ ಮತ್ತು ಅಖಿಲ ಭಾರತ ಬ್ಯಾಂಕ್ ಉದ್ಯೋಗಿಗಳ ಒಕ್ಕೂಟಗಳು ತಮ್ಮ ವೇತನ ಒಪ್ಪಂದದ ಇತ್ಯರ್ಥದ ಸಮಯದಲ್ಲಿ ಭಾರತೀಯ ಬ್ಯಾಂಕುಗಳ ಸಂಘದೊಡನೆ ಬ್ಯಾಂಕಿನ ಕಾರ್ಯಗಳನ್ನು ಸ್ವಯಂಚಲೀ ವ್ಯವಸ್ಥೆಗೆ ಒಳಪಡಿಸುವ – ಹೆಚ್ಚು ಡಿಮೆ ಈಗ ಒಪ್ಪಂದ ಮಾಡಿಕೊಂಡಿರುವಷ್ಟೇ ವ್ಯಾಪ್ತಿಯಲ್ಲಿ – ಒಪ್ಪಂದ ಮಾಡಿಕೊಂಡಿದ್ದರು. ಆದರೆ ಬ್ಯಾಂಕುಗಳೇ ಈ ನಿಟ್ಟನಲ್ಲಿ ಖಚಿತ ಹೆಜ್ಜೆಗಳನ್ನಿಡದೆ ಉದಾಸೀನ ಮಾಡಿರುವ ಈ ಬಗ್ಗೆ ಈಗಿನಂತೆ ಕೇಂದ್ರ ಬ್ಯಾಂಕು ಒಂದು ವ್ಯಾಪಕ ನೀತಿಯನ್ನೂ ರೂಪಿಸಲಿಲ್ಲ. ಅಲ್ಲದೆ ಈಗ ಸಿದ್ಧವಾಗಿರುವ ಒಂದು ಆಧೋರಚನೆಯೂ ಇರಲಿಲ್ಲ.

**ಕಾರ್ಯಬಾಹುಳ್ಯ**

ಬಹುಶಃ ಇವೆಲ್ಲಕ್ಕಿಂತ ಹೆಚ್ಚಾಗಿ, ಆಗ ಬ್ಯಾಂಕುಗಳಿಗೆ ತಮ್ಮ ಕಾರ್ಯನಿರ್ವಹಣೆಗೆ ಮಾನವ ಸಂಪನ್ಮೂಲವಷ್ಟೇ ಸಾಲದು ಎನ್ನುವಷ್ಟು ಗಾತ್ರದಲ್ಲಿ ಅವುಗಳ ವ್ಯವಹಾರಗಳಾಗಲಿ ಶಾಖೆಗಳಾಗಲಿ ಇರಲಿಲ್ಲ.

ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ನಮ್ಮ ದೇಶದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇಂದು ಆರು ಲಕ್ಷಕ್ಕೂ ಹೆಚ್ಚು ಜನ ಕೆಲಸ ಮಾಡುತ್ತಾರೆ. ಐವತ್ತು ಸಾವಿರಕ್ಕೂ ಹೆಚ್ಚು ಬ್ಯಾಂಕ್ ಶಾಖೆಗಳು ಇಂದು ಕಾರ್ಯನಿರತವಾಗಿವೆ.

ತನ್ನ ಕಾರ್ಯ ವ್ಯಾಪ್ತಿ ಹೀಗೆ ಇದ್ದಕ್ಕಿದ್ದಂತೆ ಕೇವಲ ಹತ್ತು – ಹದಿನೈದು ವರ್ಷಗಳಲ್ಲಿ ವಿಸ್ತೃತವಾದಾಗ, ಬ್ಯಾಂಕುಗಳು ವ್ಯವಸ್ಥೆಯ ಮೇಲಿನ ನಿಯಂತ್ರಣ, ಹತೋಟಿ ತಪ್ಪುವ ಸ್ಥಿತಿಯನ್ನು ತಲುಪಿದವು. ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ, ನಿರ್ಧಾರಗಳು, ತೀರುವೆಗಳು, ನಿಧಿ ವರ್ಗಾವಣೆ, ಮನೆವಾರ್ತೆಯನ್ನು ಒಪ್ಪವಾಗಿಟ್ಟುಕೊಳ್ಳುವುದು, ಇವೆಲ್ಲಾ ಶೀಘ್ರವಾಗಿ ಆಗಬೇಕಾದುದು ಅತ್ಯಗತ್ಯ ಎಂಬುದು ಬ್ಯಾಂಕುಗಳ ಆಡಳಿತ ವರ್ಗಕ್ಕೆ ಮನದಟ್ಟಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ಕೇಂದ್ರ ಬ್ಯಾಂಕಿಗೆ ಈ ಅರಿವು ತಟ್ಟಿತು.

ವಿದ್ಯುನ್ಮಾನ ಯುಗದ ಸೌಲಭ್ಯವನ್ನು ನಮ್ಮ ವ್ಯವಸ್ಥೆಯಲ್ಲಿಯೂ ಅಳವಡಿಸಿಕೊಳ್ಳಲು ಬ್ಯಾಂಕಿಂಗ್ ರಂಗ ಪ್ರಯತ್ನಿಸಬೇಕಾಯಿತು. ಇದರ ಫಲವಾಗಿ ಗಣಕಗಳು ಬ್ಯಾಂಕಿಗರ ನಾಲಗೆಯ ಮೇಲೆ ಕೌತುಕ ಸಂಭ್ರಮಗಳಿಂದ ನಲಿದಾಡಿದುವು. ಆದರೆ ಇದ್ದಕ್ಕಿದ್ದಂತೆ ಹೊಸ ವ್ಯವಸ್ಥೆಗೆ ತುಂಬು ಸ್ವಾಗತ ದೊರೆತೀತೆ? ಅದಕ್ಕೆ ವ್ಯಾಪಕ ನೀತಿ, ಸಿಬ್ಬಂದಿಯ ಸಹಕಾರ, ಸೂಕ್ತ ಆಧೋರಚನೆಗಳು ಬೇಡವೆ?

ಈ ಅಗತ್ಯಗಳನ್ನು ಪೂರೈಸಲು ೧೯೭೯ ರಲ್ಲಿ ಭಾರತೀಯ ಬ್ಯಾಂಕರರ ಸಂಘ ಭಾರತದ ವಿವಿಧ ಬ್ಯಾಂಕುಗಳ ಪ್ರಮುಖ ನೌಕರರ ಸಂಘಗಳೊಂದಿಗೆ ಬ್ಯಾಂಕ್ ವ್ಯವಹಾರಗಳಲ್ಲಿ ಗಣಕೀಕರಣ, ಸ್ವಯಂಚಲೀಕರಣಗಳನ್ನು ಅಳವಡಿಸಿಕೊಳ್ಳುವ

ಬಗೆಗೆ ಒಪ್ಪಂದವನ್ನು ಮಾಡಿಕೊಂಡಿತು. ಮುಖ್ಯವಾಗಿ ಅವು ಈ ಕ್ಷೇತ್ರಗಳಲ್ಲಿರುತ್ತವೆ.

ಈ ಅಗತ್ಯಗಳನ್ನು ಪೂರೈಸಲು ೧೯೭೯ ರಲ್ಲಿ ಭಾರತೀಯ ಬ್ಯಾಂಕರರ ಸಂಘ ಭಾರತದ ವಿವಿಧ ಬ್ಯಾಂಕುಗಳ ಪ್ರಮುಖ ನೌಕರರ ಸಂಘಗಳೊದಿಗೆ ಬ್ಯಾಂಕ್ ವ್ಯವಹಾರಗಳಲ್ಲಿ ಗಣಕೀಕರಣ, ಸ್ವಯಂಚಲೀಕರಣಗಳನ್ನು ಅಳವಡಿಸಿಕೊಳ್ಳುವ ಬಗೆಗೆ ಒಪ್ಪಂದವನ್ನು ಮಾಡಿಕೊಂಡಿತು. ಮುಖ್ಯವಾಗಿ ಅವು ಈ ಕ್ಷೇತ್ರಗಳಲ್ಲಿರುತ್ತವೆ:

**ಗಣಕೀಕರಣ**

೧ ಮಹಾನಗರಗಳ ತೀರುವೆ ಮನೆಯ ವ್ಯವಹಾರಗಳು
೨ ಅಂತರಶಾಖಾ ಅಭಿಕರಣ ಸರ್ಕಾರಿ ಖಾತೆಗಳು, ಪ್ರವಾಸಿ ಚೆಕ್ಕುಗಳು, ಉದರಿ ಕಾರ್ಡುಗಳ ವ್ಯವಹಾರಗಳ ತಾಳೆ
೩ ಸುಧಾರಿತ ವಿಧಾನಗಳಿಂದ ನಿಧಿಗಳ ವರ್ಗಾವಣೆ
೪ ವಿದೇಶಿ ವಿನಿಮಯ ವ್ಯವಹಾರಗಳು
೫ ವಿನಿಯೋಜನೆಗಳ ವ್ಯವಸ್ಥಾಪನೆ
೬ ಉದರಿ ಮಾಹಿತಿ, ಸಾಂಖ್ಯಿಕ ಹಾಗೂ ಪ್ರತೀಕ್ಷಾ ದತ್ತಾಂಶ, ವಾರ್ಷಿಕ ಸಮಾಪನ ಪರ್ಯಾವರ್ತನಗಳೂ (returns) ಸೇರಿದಂತೆ ಮಾಹಿತಿ ವಿಧಾನ ವ್ಯವಸ್ಥಾಪನೆ
೭ ಸಿಬ್ಬಂದಿಗಳ ಬಗೆಗಿನ ಎಲ್ಲ ದತ್ತಾಂಶಗಳು ಭವಿಷ್ಯನಿಧಿ ಹಾಗೂ ಪಿಂಚಣಿ
೮ ಸರಕು ದಾಸ್ತಾನಿನ ಹತೋಟಿ
೯ ವಣಿಕ ಬ್ಯಾಂಕಿಂಗ್
೧೦ ಈಗಾಗಲೇ ಗಣಕೀಕೃತವಾಗಿರುವೆಡೆಯಲ್ಲಿ ಮತ್ತು ಯಾವುದೇ ಬ್ಯಾಂಕು ತನ್ನ ನೌಕರರ ಸಂಘದೊಂದಿಗೆ ಮಾಡಿಕೊಂಡಿರುವ/ ಮಾಡಿಕೊಳ್ಳುವ ಒಪ್ಪಂದದಂತೆ ಸಂಬಳ ಮತ್ತು ವೇತನ ಪಟ್ಟಿ.

**ಸ್ವಯಂಚಲೀಕರಣ**

೧ ಚಾಲ್ತಿ ಖಾತೆಗಳು
೨ ಉಳಿತಾಯ ಖಾತೆಗಳು
೩ ನಗದುದರಿ ಹಾಗೂ ಸಾಲ ಖಾತೆಗಳು
೪ ಇತರೆ ಠೇವಣಿ ಖಾತೆಗಳು
೫ ಪ್ರಧಾನ ಪಹಣಿ ಖಾತೆಗಳು
೬ ಸಂಬಳ ಮತ್ತು ವೇತನ ಪಟ್ಟಿ

ಈ ಪಟ್ಟಿಗಳನ್ನು ನೋಡಿದಾಗ ಉಳಿದದ್ದೇನು? ಹೆಚ್ಚು ಕಡಿಮೆ ಎಲ್ಲ ವ್ಯವಹಾರಗಳೂ ಇವೆಯಲ್ಲ? ಎಂದು ಹುಬ್ಬೇರಿಸುವಂತಾದರೂ ಈ ಒಪ್ಪಂದ ಆದ ಇಷ್ಟು ದಿನಗಳ ಬಳಿಕವೂ ನಾವಿರುವುದು ಲೇಖನದ ಮೊದಲ ಸಾಲುಗಳು ತಿಳಿಸುವಂತೆಯೇ.

ಈ ಒಪ್ಪಂದಕ್ಕೆ ಕೆಲವು ಬ್ಯಾಂಕುಗಳ ನೌಕರರ ಸಂಘಗಳು ಸಹಿ ಹಾಕಿಲ್ಲ. ನೌಕರರ ಸಂಘಗಳಿಗೆ ಮೇಲಿನ ಒಪ್ಪಂದದ ಜತೆಯಲ್ಲಿಯೇ – ಸಿಬ್ಬಂದಿಯನ್ನು ತೆಗೆದುಹಾಕುವುದಿಲ್ಲ, ಗ್ರಾಮೀಣ ಪ್ರದೇಶಗಳಲ್ಲಿ ಗಣಕಗಳನ್ನು ಬಳಸುವುದಿಲ್ಲ, ಗಣಕೀಕರಣ ಒಂದು ಮಿತಿಯಲ್ಲಿ ಮಾತ್ರ ನಡೆಯುತ್ತದೆ ಎಂದು ಭಾರತೀಯ ಬ್ಯಾಂಕರರ ಸಂಘ ಆಶ್ವಾಸನೆ ನೀಡಿದರೂ ಸಹ ಇದನ್ನು ಮತ್ತೆ ಪರಿಶೀಲಿಸಬಹುದು.

ಇತ್ತೀಚೆಗೆ ೧೯೮೮ ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ಈ ಒಪ್ಪಂದಗಳನ್ನು ಕಾರ್ಯಗತ ಮಾಡಲು ಅನುವು ಮಾಡಿಕೊಡುವ ಉದ್ದೇಶದಿಂದ ಬ್ಯಾಂಕಿನ ಉಪ ಗವರ್ನರ್ ಆದ ಶ್ರೀ ರಂಗರಾಜನ್ ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ಶಿಫಾರಸುಗಳನ್ನು ಬಹುತೇಕ ಒಪ್ಪಿಕೊಂಡು ಅವುಗಳನ್ನು ಅಳವಡಿಸಿಕೊಳ್ಳುವ ಯತ್ನದಲ್ಲಿ ಬ್ಯಾಂಕುಗಳು ಸದ್ಯ ಪ್ರವೃತ್ತವಾಗಿವೆ.

ರಂಗರಾಜನ್ ಸಮಿತಿಯ ಕೆಲವು ಮುಖ್ಯ ಶಿಫಾರಸುಗಳು ಹೀಗಿವೆ:

೧ ಶಾಖೆ, ಪ್ರಾದೇಶಿಕ ಕಛೇರಿ ಹಾಗೂ ಪ್ರಧಾನ ಕಛೇರಿಗಳು – ಈ ಮೂರು ಹಂತಗಳಲ್ಲಿ ಸ್ವಯಂಚಲೀಕರಣ ಆಗಬೇಕೆಂದು ಗುರುತಿಸಲಾಗಿದೆ.
೨ ಶಾಖಾ ಮಟ್ಟದಲ್ಲಿ ಎರಡು ಮಾದರಿಗಳ ಗಣಕಗಳನ್ನು ಅಳವಡಿಸಿಕೊಳ್ಳಬೇಕು.
ಮಾದರಿ ೧: ವಿದ್ಯುನ್ಮಾನ ಪಹಣಿ ನಮೂದು ಯಂತ್ರ. ಇದು ಒಂದು ಮುದ್ರಕವನ್ನು ಹೊಂದಿರುತ್ತದೆ. ಇದು ಪಹಣಿಗಳನ್ನು ನಿರ್ವಹಿಸುವುದೇ ಅಲ್ಲದೆ ಬಡ್ಡಿಗಳನ್ನು ಲೆಕ್ಕ ಹಾಕುತ್ತದೆ. ಖಾತೆಗಳ ತಃಖ್ತೆಗಳನ್ನು ತಯಾರು ಮಾಡಿಕೊಡುತ್ತದೆ. ಸ್ಥಾಯೀ ಆದೇಶಗಳನ್ನು ನಿರ್ವಹಿಸುತ್ತದೆ. ಇಂತಹ ಒಂದೊಂದು ಯಂತ್ರವನ್ನು ಒಂದೊಂದು ಕೆಲಸಕ್ಕೆ ಬಳಸಿಕೊಳ್ಳಲಾಗುವುದು.
ಮಾದರಿ ೨: ಇದು ಹೆಚ್ಚಿನ ಸಾಮರ್ಥ್ಯ ಉಳ್ಳ ಸೂಕ್ಷ್ಮ ಪ್ರಕ್ರಾಮಕವನ್ನು ಹೊಂದಿದ್ದು ಮೇಲಿನ ಯಂತ್ರವನ್ನು ನಿರ್ವಹಿಸುವುದಲ್ಲದೆ ಪ್ರಧಾನ ಪಹಣಿಯನ್ನು ಕೂಡ ನಿರ್ವಹಿಸಿ ಎಲ್ಲ ಖಾತೆಗಳ ರೋಜು ಪುಸ್ತಕಗಳನ್ನು ಮುದ್ರಿಸಿ ಮುಖ್ಯ ರೋಜು ಪುಸ್ತಕವನ್ನು ತಾಳೆ ಮಾಡಿ ಸಾಂಖ್ಯಿಕ ಪರಿವರ್ತನಗಳನ್ನು ಮುದ್ರಿಸುತ್ತದೆ.
೩ ಬ್ಯಾಂಕುಗಳು ಹತ್ತಕ್ಕಿಂತ ಹೆಚ್ಚು ಶಾಖೆಗಳನ್ನು ಹೊಂದಿರುವ ಪ್ರದೇಶದಲ್ಲಿ ತೀರುವೆಯನ್ನು ತ್ವರಿತಗೊಳಿಸಲು ವಿಶೇಷ ಚೆಕ್ ಸೇವಾ ಕೇಂದ್ರಗಳನ್ನು ಸ್ಥಾಪಿಸಬೇಕು.
೪ ಪ್ರಧಾನ ಕಛೇರಿಗಳಲ್ಲಿ ದಾಖಲೆಗಳನ್ನು ಅತ್ಯಂತ ಸಮರ್ಥವಾದ ಪ್ರಧಾನ ಗಣಕಗಳಲ್ಲಿ ಇರಿಸಲಾಗುವುದು.
೫ ಸ್ವಯಂಚಲೀಕರಣ ಕಾರ್ಯಕ್ರಮ ಎರಡು ಹಂತಗಳಲ್ಲಿ ಮುಗಿಯಬೇಕು. ಅ ೧೯೮೫–೮೭ ಆ ೧೯೮೮–೮೯.
೬ ೧೯೮೭ರ ವೇಳೆಗೆ ಎಲ್ಲ ಪ್ರಧಾನ ಕಛೇರಿಗಳಲ್ಲಿಯೂ ಪ್ರಧಾನ ಗಣಕಗಳನ್ನು ಸ್ಥಾಪಿಸಬೇಕು. ೨೫೦೦ ಶಾಖೆಗಳನ್ನು

ಗಣಕೀಕರಿಸಬೇಕು ಮತ್ತು ಹತ್ತು ಸಾವಿರ ವಿದ್ಯುನ್ಮಾನ ಪಹಣಿ ನಮೂದು ಯಂತ್ರಗಳನ್ನು ಸ್ಥಾಪಿಸಬೇಕು. ಈ ಎಲ್ಲ ಯಂತ್ರಗಳಿಗೆ ತಗಲುವ ವೆಚ್ಚ ಸುಮಾರು ರೂ. ೧೩೫ ಕೋಟಿಗಳೆಂದು ಅಂದಾಜು ಮಾಡಲಾಗಿದೆ.

೭. ಅನುಷ್ಠಾನವನ್ನು ಗಮನಿಸಲು ಒಂದು ಸಮಿತಿಯನ್ನು ನೇಮಿಸಬೇಕು.

೮. ಇದಕ್ಕಾಗಿ ಸಾಧ್ಯವಾದಷ್ಟು ಮಟ್ಟಿಗೆ ಭಾರತದಲ್ಲಿಯೇ ಲಭ್ಯವಿರುವ ಉಪಕರಣಗಳನ್ನು ಬಳಸಿಕೊಳ್ಳುವುದು.

ಈ ಅಂಶಗಳು ಸ್ಥೂಲವಾಗಿ ರಂಗರಾಜನ್ ಸಮಿತಿಯ ಶಿಫಾರಸುಗಳನ್ನು ಪ್ರತಿನಿಧಿಸುತ್ತವೆ. ಬ್ಯಾಂಕುಗಳು ಸಿಬ್ಬಂದಿಯೊಡನೆ ಮಾಡಿಕೊಂಡ ಒಪ್ಪಂದವನ್ನು ರಂಗರಾಜನ್ ಸಮಿತಿಯ ಶಿಫಾರಸುಗಳೊಡನೆ ಹೋಲಿಸಿದಾಗ ಅಲ್ಲಿಯ ಅನೇಕ ಅಂಶಗಳು ಇಲ್ಲಿ ಇನ್ನೂ ಸ್ಥಳ ಪಡೆದುಕೊಳ್ಳದಿರುವುದು ಕಂಡುಬರುತ್ತದೆ.

ಈ ಶಿಫಾರಸುಗಳು ಕಾರ್ಯಗತವಾದಲ್ಲಿ ಭಾರತ ತಾಂತ್ರಿಕವಾಗಿ ಎಷ್ಟೇ ಹಿಂದಿರಲಿ ವಿದ್ಯುನ್ಮಾನ ಯುಗಕ್ಕೆ ಕಾಲಿಟ್ಟಂತೆಯೇ. ಆದರೆ ಸಮಿತಿಯ ಶಿಫಾರಸುಗಳಲ್ಲಿ ಸೂಚಿತವಾಗದ ಗುರಿ ಇಲ್ಲಿಯ ತನಕ ಇನ್ನೂ ಬಹುದೂರದಲ್ಲಿಯೇ ಇದೆ. ಇದಕ್ಕೆ ಕಾರಣಗಳನ್ನು ಹುಡುಕ ಹೊರಟಾಗ ನಮಗೆ ಅನೇಕ ಕುತೂಹಲಕಾರಿ ಸಂಗತಿಗಳು ಕಾಣಬರುತ್ತವೆ.

### ಅನುಷ್ಠಾನ ಸಮಿತಿ

ಅನುಷ್ಠಾನ ಸಮಿತಿಯ ವರಿಷ್ಠರು ಸಹ ಆಗಬೇಕಾದಷ್ಟು ಪ್ರಗತಿ ಆಗಿಲ್ಲವೆಂದೂ ಅನೇಕ ಶಿಫಾರಸುಗಳು ಬದಲಾವಣೆಗೆ ಪಕ್ಕಾಗಬೇಕೆಂದೂ ಒಪ್ಪಿಕೊಳ್ಳುತ್ತಾರೆ. ಆದರೂ ಅವರ ಪ್ರಕಾರ ಸಾಕಷ್ಟು ಸಂಖ್ಯೆಯ ಶಾಖೆಗಳಲ್ಲಿ ಆಗಲೇ ಯಂತ್ರಗಳು ಸ್ಥಾಪಿತವಾಗಿವೆ. ಬ್ಯಾಂಕುಗಳಿಗೆ ಅವು ಕೊಳ್ಳಬೇಕಾದ ಶಿಷ್ಟೀಕೃತ ಮಾದರಿಯನ್ನು ಸೂಚಿಸಲಾಗಿದೆ. ಶಿಷ್ಟೀಕೃತ ಕನಿಷ್ಠ ಅಗತ್ಯಗಳನ್ನು ಪೂರೈಸುವ, ತಮಗೆ ಸರಿ ಎನಿಸುವ ಗಣಕಗಳ್ನು ಬ್ಯಾಂಕುಗಳು ಕೊಳ್ಳಬಹುದಾಗಿದೆ. ಮೊದಲನೆಯ ಮಾದರಿ ಯಂತ್ರಗಳ ಸ್ವರೂಪ ಕುರಿತು ಅಧ್ಯಯನ ನಡೆಸಲು ಏಪ್ರಿಲ್ ೮೬ ರ ನಂತರ ಒಂದು ಸಮಿತಿ ರೂಪುಗೊಳ್ಳಬೇಕಾಗಿಸದೆ ಎಂದು ವರಿಷ್ಠರು ಅಭಿಪ್ರಾಯಪಟ್ಟಿದ್ದರು. ಅಲ್ಲದೆ ನೌಕರ ಸಂಘಗಳ ಜತೆಗೆ ಮಾಡಿಕೊಂಡ ಒಪ್ಪಂದ ೧೯೮೬ನೆಯ ಸೆಪ್ಟೆಂಬರ್‌ಗೆ ಮುಗಿಯಲಿರುವುದರಿಂದ ಹೊಸ ಒಪ್ಪಂದ ಮಾಡಿಕೊಳ್ಳುವ ವೇಳೆಗೆ ಅನೇಕ ಹೊಸ ಚಿಂತನೆಗಳಿಗೆ ಚಾಲನೆ ದೊರೆಯಬಹುದೆಂಬ ಆಸೆಯನ್ನೂ ಅವರು ಹೊಂದಿದ್ದಾರೆ.

ಈಗ್ಗೆ ಕೆಲ ತಿಂಗಳ ಹಿಂದೆ ಕಂಪ್ಯೂಟರ್ ಪತ್ರಿಕೆಯೊಂದರಲ್ಲಿ ಪ್ರಕಟವಾದ ಸಂದರ್ಶನವೊಂದರಲ್ಲಿ ಡಾ. ರಂಗರಾಜನ್ ರವರು ಸಮಿತಿಯ ವರದಿಯ ಬಗೆಗೆ ಮುಖ್ಯ ಆಕ್ಷೇಪವಾದ ವರದಿ ಕೇವಲ ಅಲ್ಲಿನ ಸಮಸ್ಯೆಗಳನ್ನು ಕುರಿತಂತಿದೆಯೆಂಬ, ಒಟ್ಟಾರೆ ದೃಷ್ಟಿ ಇಲ್ಲವೆಂಬ ಅಂಶದ ಬಗೆಗೆ ಉತ್ತರಿಸುತ್ತಾ ಪ್ರಾರಂಭ ಎಲ್ಲಿಯಾದರೂ ಆಗಬೇಕಲ್ಲವೆ? ತತ್‌ಕ್ಷಣದ ಆದ್ಯತೆಯ ಹಾಗೂ ಗಣಕೀಕರಣ ವ್ಯವಹಾರಿಕವಾಗಿ ಆಗಬಹುದಾದ ಕ್ಷೇತ್ರಗಳನ್ನು ಸಮಿತಿ ಗಮನಿಸಿದೆ ಎಂದಿದ್ದಾರೆ.

### ಬ್ಯಾಂಕುಗಳ ಆಡಳಿತ ವರ್ಗ

ಅನುಷ್ಠಾನ ಸಮಿತಿ ಎಷ್ಟೇ ಒತ್ತಡ ಹೇರಿದರೂ ಬ್ಯಾಂಕುಗಳ ಆಡಳಿತ ವರ್ಗಗಳು ಸಂಪೂರ್ಣವಾಗಿ ಸಹಕಾರವಿತ್ತು. ಮನಃಪೂರ್ವಕವಾಗಿ ಪ್ರಯತ್ನಿಸಿದ ಹೊರತು ಅನುಷ್ಠಾನ ದೂರದಲ್ಲಿಯೇ ಇರುತ್ತದೆ. ಸೂಕ್ಷ್ಮವಾಗಿ ಗಮನಿಸಿದರೆ ಅನೇಕ ಬ್ಯಾಂಕುಗಳ ಆಡಳಿತ ವರ್ಗಗಳಿಗೆ ಗಣಕೀಕರಣದ ಬಗೆಗೆ ಅಷ್ಟೊಂದು ಉತ್ಸಾಹ ಆಸಕ್ತಿಗಳು ಇಲ್ಲದಿರುವುದು ಗೋಚರವಾಗುತ್ತದೆ. ಕೇವಲ ಕೇಂದ್ರ ಬ್ಯಾಂಕಿನ ಆದೇಶವನ್ನು ಪಾಲಿಸುವ ಸಲುವಾಗಿ ಯಂತ್ರಗಳನ್ನು ಬ್ಯಾಂಕುಗಳು ಕೊಳ್ಳುತ್ತಿವೆ. ಕೊಂಡ ಯಂತ್ರಗಳಲ್ಲಿ ಎಲ್ಲವೂ ಬಳಕೆಯಲ್ಲಿಲ್ಲ. ಇಲ್ಲಿಯವರೆಗೆ ಸ್ಥಾಪಿತವಾದ ವಿದ್ಯುನ್ಮಾನೀಯ ಪಹಣಿ ಯಂತ್ರಗಳಲ್ಲಿ ಅರ್ಧ ಪಾಲು ದೆಹಲಿಯಲ್ಲಿಯೇ ಇವೆ ಎಂಬುದು ಇದರ ಹಿಂದಿನ ಒತ್ತಡಗಳನ್ನೂ, ಅನಾಸಕ್ತಿಯನ್ನೂ ಹೊರಗೆಡಹುತ್ತದೆ. ಒಂದು ಅಭಿಪ್ರಾಯದಂತೆ ಈ ಅನಾಸಕ್ತಿಗೆ ಮುಖ್ಯ ಕಾರಣವೆಂದರೆ ಬ್ಯಾಂಕುಗಳ ಆಡಳಿತ ವರ್ಗದ ಮುಖ್ಯರಿಗೆ ಗಣಕಗಳ ಬಗೆಗೆ ಸಾಕಷ್ಟು ತಿಳುವಳಿಕೆ ಇಲ್ಲದಿರುವುದೇ ಆಗಿದೆ. ಹಿರಿಯ ಸ್ಥಾನಗಳಲ್ಲಿರುವವರಿಗೆ ಎಲ್ಲ ವಿಷಯಗಳಿಗೆ ಇತರರನ್ನು ಅವಲಂಬಿಸಬೇಕಾಗುವುದು ಹಿತಕರ ವಿಷಯವೇನೂ ಅಲ್ಲ.

### ಸಿಬ್ಬಂದಿ ವರ್ಗ

ನೌಕರ ಸಂಘಗಳು ತತ್ವಶಃ ಗಣಕೀಕರಣವನ್ನು ಒಪ್ಪಿ ಒಪ್ಪಂದಕ್ಕೆ ಸಹಿ ಹಾಕಿದ್ದರೂ ಸಿಬ್ಬಂದಿವರ್ಗ ಗಣಕಗಳ ಬಗೆಗೆ ತುಂಬ ಅನುಕೂಲಕರ ನಿಲುವುಗಳನ್ನು ಹೊಂದಿಲ್ಲ. ಒಪ್ಪಂದಕ್ಕೆ ಸಹಿ ಹಾಕದ ನೌಕರರ ಸಂಘಗಳಂತೂ ಗಣಕೀಕರಣವನ್ನು ಗಟ್ಟಿಯಾಗಿ ವಿರೋಧಿಸುತ್ತಲೇ ಇವೆ. ಗಣಕಗಳನ್ನು ಬ್ಯಾಂಕಿನಲ್ಲಿ ತಂದಿರಿಸಿದಾಗ ಅವುಗಳ ಚಾಲನೆಗೆ ತಡೆ ಒಡ್ಡುವುದು, ಅವು ಸಮರ್ಪಕವಾಗಿ ಕಾರ್ಯ ನಿರ್ವಹಿಸದಂತೆ ಅವನ್ನು ಹಾಳು ಮಾಡುವುದು ಮುಂತಾದ ಘಟನೆಗಳು ಜರುಗಿರುವುದೂ ಉಂಟು. ಉದ್ಯೋಗಾವಕಾಶಗಳು ತಪ್ಪಿ ಹೋಗುತ್ತವೆನ್ನುವ ಅಭಿಪ್ರಾಯ ಹಾಗೂ ನಿಧಾನಕ್ಕೆ ತಮ್ಮ ಸಂಘಟನೆಗಳಿಗೆಯೇ ಒದಗಬಹುದಾದ ಅಪಾಯದ ಬಗೆಗಿನ ಭಯ ಬಹುಶಃ ಸಿಬ್ಬಂದಿವರ್ಗದ ಗಣಕ ವಿರೋಧಿ ನಿಲುವುಗಳಿಗೆ ಕಾರಣಗಳಿರಬಹುದು. ಈ ಸಮಸ್ಯೆ ಗಂಭೀರ ರೂಪ ತಳೆಯುವ ಸೂಚನೆಗಳಿವೆ. ಕಲ್ಕತ್ತೆಯಲ್ಲಿ ತುಂಬ ಸದಸ್ಯರನ್ನು ಹೊಂದಿರುವ ಭಾರತೀಯ ಬ್ಯಾಂಕ್ ಉದ್ಯೋಗಿಗಳ ಒಕ್ಕೂಟ ಈ ಬಗ್ಗೆ ದೃಢ ನಿರ್ಧಾರ ತಳೆದಿದೆ. ಬ್ಯಾಂಕ್ ವ್ಯವಹಾರಗಳಲ್ಲಿ ಆದ ಹೆಚ್ಚಳಕ್ಕೆ ಅನುಗುಣವಾಗಿ ಸಿಬ್ಬಂದಿ ನೇಮಕಾತಿ ಆಗಿಲ್ಲವೆಂಬುದು ಈ ಸಂಘದವರು ಅವರ ನಿರ್ಧಾರಕ್ಕೆ ಕೊಡುವ ಕಾರಣ.

### ಗಣಕಗಳ ಉದ್ಯಮ

ಭಾರತೀಯ ಬ್ಯಾಂಕುಗಳು ಉದ್ಯಮದತ್ತ ದೃಷ್ಟಿ ಹರಿಸಿದ್ದು ತಮಗೆ ನಿರ್ದಿಷ್ಟವಾದ ಗುರಿಯೊಂದನ್ನು ವಿಧಿಸಿದಾಗಲೇ. ಅದನ್ನು ಸಾಧಿಸಬೇಕಾದ ಒತ್ತಡದೊಂದಿಗೆ ಮೊದಲ ಬಾರಿಗೆ ಯಂತ್ರಗಳನ್ನು ಕೊಳ್ಳುವ ಉತ್ಸಾಹದಲ್ಲಿ ಗಣಕಗಳ ಉದ್ಯಮ ರಂಗದಲ್ಲಿ ಅವು ಭಾರೀ ಬೇಡಿಕೆಯನ್ನು ಸೃಷ್ಟಿಸಿದುವು. ಇಂತಹ ದೊಡ್ಡ ಬೇಡಿಕೆಯನ್ನು ನಿರೀಕ್ಷಿಸದಿದ್ದ ಗಣಕ ಉದ್ಯಮರಂಗ ಥಟಕ್ಕನೆ ಹೆಚ್ಚು ಹೆಚ್ಚು ಉತ್ಪಾದನೆಗೆ ತೊಡಗಬೇಕಾಯಿತು. ಈ ಕಾರ್ಯವನ್ನು ಭಾರತದ ಗಣಕ ಉದ್ಯಮ ಗುಣಮಟ್ಟವನ್ನು ಉಳಿಸಿಕೊಂಡೇ ಸಾಧಿಸಬೇಕಾಗಿದೆ. ಉತ್ಪಾದನೆ ಸಮರ್ಪಕ ಪ್ರಮಾಣದಲ್ಲಿಲ್ಲ. ಆದರೆ ಈ ರಂಗಕ್ಕೆ ಭಾರೀ ಭವಿಷ್ಯವಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಇಲ್ಲಿಯವರೆಗೆ ಈ ಉದ್ಯಮದಲ್ಲಿ ಹೂಡಲಾದ ಬಂಡವಾಳ ರೂ. ೧೫೦ ಕೋಟಿ. ಆದರೆ ರಂಗರಾಜನ್ ಸಮಿತಿಯ ಶಿಫಾರಸಿನ ಮೊದಲ ಹಂತದಲ್ಲಿ ಬ್ಯಾಂಕುಗಳಿಗೆ ಬೇಕಾಗುವ ಯಂತ್ರಗಳ ಬೆಲೆಯೇ ಸುಮಾರು ರೂ. ೧೩೫ ಕೋಟಿ ಆಗಬಹುದೆಂದು ಅಂದಾಜು ಮಾಡಲಾಗಿದೆ. ಎರಡನೆಯ ಹಂತದಲ್ಲಿ ಅವು ಬಳಸಬಯಸುವ ಯಂತ್ರಗಳ ಬೆಲೆ ಸುಮಾರು ರೂ. ೨೫೦ ಕೋಟಿ. ಅಲ್ಲದೆ ಇದು ಪ್ರಾರಂಭ ಮಾತ್ರ. ಎಂದರೆ ಬ್ಯಾಂಕಿಂಗ್ ವಲಯದಲ್ಲಿಯೇ ಗಣಕೋದ್ಯಮಕ್ಕೆ ಇರುವ ಬೇಡಿಕೆಯನ್ನು ಗಮನಿಸಬಹುದು. ಗಣಕೋದ್ಯಮ ಭಾರತದಲ್ಲಿ ಗಟ್ಟಿಯಾಗಿ ತಳ ಊರಿ ಬೃಹತ್ತಾಗಿ ಬೆಳೆಯಲು ಬಹುಶಃ ಭಾರತೀಯ ರೈಲ್ವೆ ಹಾಗೂ ಬ್ಯಾಂಕುಗಳು ಬಹುಮಟ್ಟಿಗೆ ಕಾರಣೀಭೂತವಾಗುತ್ತವೆ ಎನ್ನಬಹುದು. ಕಂಪ್ಯೂಟರ್ ಉದ್ಯಮ ಈ ತುರ್ತು ಕರೆಗೆ ಓಗೊಡಬೇಕಷ್ಟೆ.

ಅನೇಕ ಸಂಸ್ಥೆಗಳು ಇಂದು ಗಣಕಗಳನ್ನು ತಯಾರಿಸಿ ಮಾರುಕಟ್ಟೆಗೆ ಒದಗಿಸಲು ಮುಂದೆ ಬಂದಿವೆ. ಹೆಚ್.ಸಿ.ಎಲ್. ಉಷಾ, ವಿಪ್ರೊ, ಐಸಿಐಎಂ, ಡಿಸಿಎಂ ಮೊದಲಾದವು ಅವುಗಳಲ್ಲಿ ಕೆಲವು.

### ಯಾವ ಮಾದರಿ ?

ರಂಗರಾಜನ್ ಸಮಿತಿ ಸೂಚಿಸಿದ ಗಣಕ ಎರಡು ಮಾದರಿಗಳಲ್ಲಿ ಯಾವುದನ್ನು ಉಪಯೋಗಿಸುವುದು ಹೆಚ್ಚು ಅನುಕೂಲಕರ ಎಂಬುದರಲ್ಲಿ ಬ್ಯಾಂಕು – ಬ್ಯಾಂಕುಗಳ ನಡುವೆ ಭಿನ್ನಾಭಿಪ್ರಾಯಗಳಿವೆ. ಹೆಚ್ಚು ಬ್ಯಾಂಕುಗಳು ಮೊದಲ ಮಾದರಿಯಾದ ವಿದ್ಯುನ್ಮಾನ ಪಹಣಿ ನಮೂದು ಯಂತ್ರಗಳತ್ತ ಒಲವು ತೋರಿಸಿದರೆ ಭಾರತೀಯ ಸ್ಟೇಟ್ ಬ್ಯಾಂಕ್‌ಗೂ ಅದರ ಸಹವರ್ತಿ ಬ್ಯಾಂಕುಗಳು ಎರಡನೆಯ ಮಾದರಿಯ ಸೂಕ್ಷ್ಮ ಪ್ರಕ್ರಾಮಕಗಳೇ ಸದ್ಯಕ್ಕೆ ಸರಿಯಾದ ಗಣಕ ಎಂಬ ಅಭಿಪ್ರಾಯ ತಳೆದಿವೆ. ಇದಕ್ಕೆ ಅವು ಕೊಡುವ ಮುಖ್ಯ ಕಾರಣವೆಂದರೆ ಇದು ಮೊದಲನೆಯ ಮಾದರಿಯ ಯಂತ್ರದಲ್ಲಿ ಸಾಕಷ್ಟು ಸುರಕ್ಷಿತತೆ ಇಲ್ಲ. ದಾಖಲೆಗಳು ಮೂರನೆಯವರ ಹಸ್ತಕ್ಷೇಪಕ್ಕೆ ಪಕ್ಕಾಗುವ ಸಂಭವ ಉಂಟು. ಈ ಬಗ್ಗೆ ಸಾಕಷ್ಟು ಅಧ್ಯಯನ ನಡೆಸಿದ ನಂತರವೇ ಮುಂದಿನ ಕ್ರಮ ಎಂಬುದು ಅವರ ನಿಲುವು. ಶ್ರೀ ರಂಗರಾಜನ್ ಅವರು ಸಹ ಈ ಬಗ್ಗೆ ಸೂಕ್ತ ಬದಲಾವಣೆಗಾಗಿ ಅಧ್ಯಯನ ತಂಡವೊಂದನ್ನು ನೇಮಿಸುವ ಭರವಸೆಯನ್ನು ಪತ್ರಿಕಾ ಸಂದರ್ಶನವೊಂದರಲ್ಲಿ ನೀಡಿದ್ದಾರೆ. ಈ ಸುಧಾರಣೆ ಆಗಿ ಎರಡೂ ಮಾದರಿ ಗಣಕಗಳು ಪರಸ್ಪರ ಪೂರಕವಾಗಿ ಕೆಲಸ ಮಾಡುವಂತಾದಾಗ ಮಾತ್ರ ಬ್ಯಾಂಕುಗಳು ನೈಜ ಅರ್ಥದಲ್ಲಿ ಗಣಕೀಕೃತವಾದಾವು – ಕನಿಷ್ಠ ಶಾಖಾ ಮಟ್ಟದಲ್ಲಿ.

### ಶಿಕ್ಷಣ ಹಾಗೂ ತರಬೇತಿ

ರಂಗರಾಜನ್ ಸಮಿತಿಯವರು ನಿರ್ಧರಿಸಿರುವ ಗಣಕೀಕರಣದ ಗಾತ್ರ ವಾಸ್ತವಕ್ಕಿಳಿಸಲಾರದಷ್ಟು ಬೃಹತ್ತಾಗಿದೆ ಎಂಬುದು ಅದನ್ನು ಟೀಕಿಸುವವರ ಒಂದು ಅಭಿಪ್ರಾಯ. ಇದಕ್ಕೆ ಹಿನ್ನೆಲೆಯಾಗಿ ಅವರು ಕೇಳುವ ಪ್ರಶ್ನೆಗಳು ಇವು: ಒಂದು ವೇಳೆ ಗುರಿಗೆ ತಕ್ಕಷ್ಟು ಯಂತ್ರಗಳನ್ನು ಬ್ಯಾಂಕುಗಳು ಸಜ್ಜುಗೊಳಿಸಿಕೊಂಡಾಗ್ಯೂ ಅವುಗಳನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಜನರನ್ನು ಬ್ಯಾಂಕುಗಳು ರೂಪಿಸಬಲ್ಲವೆ? ಯಂತ್ರಗಳ ದುರಸ್ತು ಹಾಗೂ ನಿರ್ವಹಣೆಗೆ ಯಾವಾಗಲೂ ಗಣಕಗಳ ಸಂಸ್ಥೆಗಳನ್ನೇ ಅವಲಂಬಿಸಲಾಗುವುದು? ತರಬೇತಿ ನೀಡಬಲ್ಲಂತಹವರು ಎಷ್ಟು ಮಂದಿ ಇದ್ದಾರೆ? ಆದರೆ ರಂಗರಾಜನ್ ಸಮಿತಿ ಈ ಅಂಶಗಳನ್ನು ಪೂರ್ಣವಾಗಿ ನಿರ್ಲಕ್ಷಿಸಿಲ್ಲ. ತರಬೇತಿಯ ಬಗೆಗೆ ಖಚಿತವಾದ ಸೂಚನೆಗಳು ವರದಿಯಲ್ಲಿ ಇವೆ.

ಬ್ಯಾಂಕುಗಳ ಸಿಬ್ಬಂದಿ ತರಬೇತಿ ಕೇಂದ್ರಗಳು ಈ ನಿಟ್ಟಿನಲ್ಲಿ ವಿಶೇಷ ಜವಾಬ್ದಾರಿ ಹೊರಬೇಕಾಗುತ್ತದೆ. ಗಣಕಗಳನ್ನು ತಮ್ಮ ಶಿಕ್ಷಣ ಕ್ರಮದಲ್ಲಿಯೂ ಅವು ಅಳವಡಿಸಿಕೊಳ್ಳಬೇಕಾಗುತ್ತದೆ. ಗಣಕಗಳನ್ನು ಸಿಬ್ಬಂದಿ ವರ್ಗಕ್ಕೆ ಪರಿಚಯಿಸುವುದೇ ಅಲ್ಲದೆ, ಗಣಕಗಳ ಸಹಾಯದಿಂದ ಕಲಿಯುವಿಕೆ, ಗಣಕಾಧಾರಿತ ತರಬೇತಿ, ಅಲ್ಲದೆ ಗಣಕ ಸಹಾಯದ ಶಿಕ್ಷಣ ಮುಂತಾದ ಪದ್ಧತಿಗಳನ್ನು ಶಿಕ್ಷಣದಲ್ಲಿ ಬಳಸಬೇಕಾಗುತ್ತದೆ. ಸದ್ಯ ಇರುವ ಎಲ್ಲ ಸಿಬ್ಬಂದಿಗೂ ಗಣಕದ ಪರಿಚಯ ಸರಿಯಾದ ರೀತಿಯಲ್ಲಿ ಆದರೆ ಗಣಕೀಕರಣ ಅರ್ಧ ಯಶಸ್ವಿಯಾದಂತೆ. ಇದಕ್ಕೆ ಎರಡು ಹಂತಗಳಲ್ಲಿ ಪ್ರಯತ್ನಿಸಬಹುದು.

ಅ. ಗಣಕಗಳು, ಅವುಗಳ ಕ್ರಮವಿಧಿಗಳು ಬ್ಯಾಂಕಿನ ಗಣಕೀಕರಣದ ಯೋಜನೆಯ ರೂಪು ರೇಷೆಗಳು ಮುಂತಾದುವನ್ನು ಗೃಹ ಪತ್ರಿಕೆಗಳ ಮೂಲಕ ಸಿಬ್ಬಂದಿ ವರ್ಗಕ್ಕೆ ನಿಯತಕಾಲಿಕವಾಗಿ ತಿಳಿಸುತ್ತಿರುವುದು.

ಆ. ಬ್ಯಾಂಕಿನ ಎಲ್ಲ ತರಬೇತಿ ಕಾರ್ಯಕ್ರಮಗಳಲ್ಲಿ ಕೊಂಚ ಭಾಗವನ್ನು ಗಣಕ ಶಿಕ್ಷಣಕ್ಕೆ ಮೀಸಲಿಡುವುದು. ಅಲ್ಲದೆ, ಬೇರೆಲ್ಲ ವಿಷಯಗಳ ಶಿಕ್ಷಕರೂ ತಮ್ಮ ಕ್ಷೇತ್ರಗಳಲ್ಲಿ ಗಣಕಗಳ ಬಳಕೆ ಹೇಗೆ ಏಕೆ ಮುಂತಾದವನ್ನು ಅಭ್ಯರ್ಥಿಗಳಿಗೆ ತಿಳಿಸುವುದನ್ನು ಪಥ್ಯವಾಗಿಸುವುದು.

ಬ್ಯಾಂಕಿನ ಉನ್ನತ ಅಧಿಕಾರಿಗಳಿಗೆ ಕೂಡ ಆಗಾಗ ಕಮ್ಮಟ, ವಿಚಾರ ಸಂಕಿರಣ ಮುಂತಾದವುಗಳ ಮೂಲಕ ಗಣಕ ತಂತ್ರಜ್ಞಾನದ

ಬಗೆಗೆ ಮಾಹಿತಿಯನ್ನು ಒದಗಿಸುತ್ತಿರಬೇಕು. ಪ್ರತಿ ವರ್ಷ ವ್ಯವಸ್ಥಾಪಕ ಹುದ್ದೆಯಲ್ಲಿರುವ, ಕನಿಷ್ಠ ಸಾವಿರ ಜನಕ್ಕಾದರೂ ತರಬೇತಿ ಕೇಂದ್ರಗಳಂತಹ ಸಂಸ್ಥೆಗಳ ಮೂಲಕ ಗಣಕ ಶಿಕ್ಷಣದ ವ್ಯವಸ್ಥೆಯಾಗಬೇಕು. ಹೀಗಿ ಶಿಕ್ಷಣ ಪಡೆದವರನ್ನು, ಪರಿಣತರನ್ನು ಆ ಕ್ಷೇತ್ರದಲ್ಲಿಯೇ ಉಪಯೋಗಿಸಿಕೊಳ್ಳುವುದು ಅತ್ಯಾವಶ್ಯಕ. ಬ್ಯಾಂಕುಗಳಲ್ಲಿ ಯಾವ ಕ್ಷೇತ್ರದಲ್ಲಿ ಓರ್ವ ವ್ಯಕ್ತಿ ಪರಿಣತಿ ಪಡೆದಿರುತ್ತಾನೋ ಅದರ ಹೊರತಾಗಿಯೇ ಅವನನ್ನು ಬಳಸುವ ಪರಿಪಾಠವಿದೆ. ಇದು ತಪ್ಪಬೇಕು, ಕನಿಷ್ಠ ಗಣಕಗಳ ಮಟ್ಟಿಗಾದರೂ.

**ಕಂಪ್ಯೂಟರ್ ವಂಚನೆಗಳು, ಅಪರಾಧಗಳು–**

ಬ್ಯಾಂಕುಗಳ ಆಡಳಿತ ವರ್ಗಗಳ ಗಣಕೀಕರಣದ ಬಗೆಗೆ ಕೇವಲ ಅನಾಸಕ್ತಿ , ನಿರುತ್ಸಾಹಗಳೇ ಅಲ್ಲದೆ ಒಂದು ರೀತಿಯ ಭಯವೂ ಇರುವಂತೆ ತೋರುತ್ತದೆ. ಅದು ಗಣಕ ವಂಚನೆಗಳ ಬಗೆಗೆ. ಇದು ಒಂದು ರೀತಿಯಲ್ಲಿ ಸಹಜ. ಏಕೆಂದರೆ ಗಣಕದ ಮೂಲಕ ಆಗುವ ವಂಚನೆಗಳು ಪತ್ತೆಯಾಗುವುದೇ ಕಷ್ಟ. ಅಲ್ಲದೆ ಇಂತಹ ಅಪರಾಧಗಳಿಂದ ಬ್ಯಾಂಕಿಗೆ ಆಗಬಹುದಾದ ನಷ್ಟ ಸಾಕಷ್ಟು ದೊಡ್ಡ ಪ್ರಮಾಣದ್ದಾಗಿರುತ್ತದೆ. ಗಣಕಗಳನ್ನು ತುಂಬ ವ್ಯಾಪಕವಾಗಿ ಬಳಸುವ ಅಮೆರಿಕಾದಲ್ಲಿ ಇಂತಹ ಅಪರಾಧವೊಂದರಿಂದ ದೊಡ್ಡ ಕಂಪನಿಗೆ ಆಗುವ ಸರಾಸರಿ ನಷ್ಟ ಆರು ಲಕ್ಷ ಡಾಲರುಗಳು ಹಾಗೂ ಬ್ಯಾಂಕುಗಳಿಗೆ ಇಂತಹ ಅಪರಾಧಗಳಿಂದಾಗಿ ಉಂಟಾಗುವ ಸರಾಸರಿ ನಷ್ಟ ಎರಡು ಲಕ್ಷ ಡಾಲರುಗಳೆಂದೂ ಕ್ಯಾಲಿಫೋರ್ನಿಯದ ಸ್ಟಾನ್ ಫರ್ಡ್ ಸಂಶೋಧನಾ ಸಂಸ್ಥೆ ನಡೆಸಿರುವ ಸಮೀಕ್ಷೆಯಿಂದ ತಿಳಿದು ಬಂದಿದೆ. ರಕ್ಷಣಾ ವ್ಯವಸ್ಥೆಯಲ್ಲಿನ ದೋಷಗಳು ಅವಕ್ಕಿಂತ ಹೆಚ್ಚಾಗಿ ಅವುಗಳ ಬಗ್ಗೆ ಸರಿಯಾಗಿ ಗಮನ ಹರಿಸದಿರುವುದು ಇದಕ್ಕೆ ಮುಖ್ಯ ಕಾರಣವೆಂದು ಸಮೀಕ್ಷೆ ತಿಳಿಸುತ್ತಿದೆ.

ಭಾರತೀಯ ಬ್ಯಾಂಕುಗಳು ಗಣಕೀಕರಣದ ಹಾದಿಯಲ್ಲಿನ್ನೂ ಮೊದಲ ಹೆಜ್ಜೆಗಳನ್ನಿಡುತ್ತರುವುದರಿಂದ ಇಂತಹ ಅಧ್ಯಯನಗಳ ಬೆಳಕಿನಲ್ಲಿ ಸೂಕ್ತ ರಕ್ಷಣಾ ವ್ಯವಸ್ಥೆಗಳನ್ನು ಅಳವಡಿಸಿ-ಕೊಳ್ಳಬಲ್ಲವಾಗಿವೆ.

ವಿದ್ಯುಚ್ಛಕ್ತಿ ಸದಾ ಒಂದೇ ತೀವ್ರತೆಯಲ್ಲಿ ಪ್ರವಹಿಸುವ ವ್ಯವಸ್ಥೆ, ಹಾಗೂ ಧೂಳಿನ ಕಣಗಳು ಗಣಕದ ಪ್ರಮುಖ ಭಾಗಗಳಿಗೆ ತಲುಪುವುದನ್ನು ತಪ್ಪಿಸಲೋಸುಗ ಹವಾನಿಯಂತ್ರಣ ವ್ಯವಸ್ಥೆಗಳನ್ನು ಗಣಕಗಳಿಗೆ ಒದಗಿಸುವುದು ಪ್ರಾಥಮಿಕ ಸುರಕ್ಷಣಾ ಕ್ರಮಗಳಾಗಿವೆ. ವಿದ್ಯುಚ್ಛಕ್ತಿಯ ಉತ್ಪಾದನೆ ಸಾಕಷ್ಟಿಲ್ಲದ ನಮ್ಮ ದೇಶದಲ್ಲಿ ಇದೂ ಒಂದು ಸಮಸ್ಯೆಯಾಗಬಹುದು. ಇದಕ್ಕೆ ಪರ್ಯಾಯ ವ್ಯವಸ್ಥೆಯನ್ನು ಬ್ಯಾಂಕುಗಳು ರೂಪಿಸಿಕೊಳ್ಳಬೇಕಾಗುತ್ತದೆ. ಇನ್ನು ಗಣಕದ ಚಾಲನೆಗೆ ಬೇಕಾಗುವ ನುಡಿಗಟ್ಟುಗಳು. ಸೆಸೇಮ, ಬಾಗಿಲು ತೆರೆ ಎಂದು ಆಲಿಬಾಬಾನ ತರಹ ನಾವು ಮಂತ್ರವೊಂದನ್ನು ಗಣಕಕ್ಕೆ ಊಡಿದಾಗಲೇ ಅದು ಮುಂದೆ ನಮ್ಮ ಮಾತನ್ನು ಕೇಳುತ್ತದೆ. ಇಲ್ಲದಿದ್ದರೆ ಇಲ್ಲ. ಆದರೆ ಸಿಸೇಮ ಬಾಗಿಲು ತೆರೆ ಎನ್ನವುದು ಯಾವ ಕಾಸಿಮನಿಗೂ ತಿಳಿಯಬಾರದು ಅಷ್ಟೇ. ಇದರ ಸಲುವಾಗಿ ಅನೇಕ ವಿಧಾನಗಳಿವೆ. ಗಣಕದಲ್ಲಿರುವ ಮಾಹಿತಿ, ದತ್ತಾಂಶಗಳ ಮಹತ್ವದ ಹಿನ್ನೆಲೆಯಲ್ಲಿ ಸಂಕೇತ ಪದಗಳನ್ನೂ ಇತರೆ ರಕ್ಷಣಾ ವ್ಯವಸ್ಥೆಯನ್ನೂ ರೂಪಿಸಬೇಕಾಗುತ್ತದೆ. ಉದಾಹರಣೆಗೆ, ಇಂತಹ ಒಂದು ವ್ಯವಸ್ಥೆಯಲ್ಲಿ ನಿರ್ದಿಷ್ಟ ವ್ಯಕ್ತಿಗಳು ಮಾತ್ರ ಗಣಕಗಳನ್ನು ನಿರ್ವಹಿಸಬೇಕೆಂದಿಟ್ಟುಕೊಳ್ಳಿ. ಆಗ ಗಣಕದ ಕೋಣೆಯ ಬಾಗಿಲು ತೆರೆಯಲು ಅವರು ತಮ್ಮ ಬೆರಳಚ್ಚನ್ನು ಬಾಗಿಲ ಮೇಲೆ ಮೂಡಿಸಬೇಕಾಗುತ್ತದೆ. ಮೊದಲೇ ಇರುವ ಬೆರಳಚ್ಚುಗಳಿಗೆ ಇದು ಹೊಂದಿಕೆಯಾದರೆ ಅವರಿಗೆ ಗಣಕ ಸ್ವಾಗತವನ್ನಿತ್ತು ಒಳಗೆ ಬರಮಾಡಿಕೊಳ್ಳುತ್ತದೆ. ಇಲ್ಲವಾದರೆ ಪ್ರವೇಶ ನಿಷಿದ್ಧ. ಇನ್ನು ಕೆಲ ವ್ಯವಸ್ಥೆಗಳಲ್ಲಿ ಗಣಕ ಚಾಲಕರು ಧರಿಸುವ ಸಂಕೇತಪಟ್ಟಿಯನ್ನೇ ಗಣಕಗಳು ಗುರುತಾಗಿ ಗ್ರಹಿಸಬಲ್ಲವಾಗಿರುತ್ತವೆ. ಇಂತಹ ವಿಧಾನಗಳು ದಿನದಿನಕ್ಕೂ ಸುಧಾರಣೆಗೊಳ್ಳುತ್ತಿರುತ್ತವೆ. ಹಾಗೆಯೇ ಇಂದು ಬಹಳ ದುಬಾರಿ ಎನಿಸಿದ ವ್ಯವಸ್ಥೆಗಳೂ ಒಂದು ದಿನ ಬಹಳ ಅಗ್ಗವಾಗಿ ಎಲ್ಲರಿಗೂ ದೊರೆಯುವ ಹಾಗಾಗುತ್ತದೆ. ಸಂಕೇತ ಪದಗಳಿಗೆ ಸಂಬಂಧಿಸಿದಂತೆ ಅಮೆರಿಕಾದಲ್ಲಿ ಇತ್ತೀಚೆಗೆ ಕಂಡುಬರುವ ವಿದ್ಯಮಾನವೊಂದನ್ನು ಗಮನಿಸಬಹುದು. ಹದಿಹರೆಯದ ಹವ್ಯಾಸಿ ಗಣಕತಜ್ಞರು – ಇವರನ್ನು ಹ್ಯಾಕರ್ಸ್ ಎನ್ನುತ್ತಾರೆ. ದೊಡ್ಡ ದೊಡ್ಡ ಗಣಕ ಜಾಲಗಳನ್ನು ಭೇದಿಸಿದ ಉದಾಹರಣೆಗಳು ಅಮೆರಿಕದಲ್ಲಿ ಹೇರಳ. ಜುಲೈ ೧೯೮೫ ರಲ್ಲಿ ಅಮೆರಿಕದ ಮಿಲಿಟರಿ ಉಪಗ್ರಹದ ಸಂಪರ್ಕ ಸಾಧಿಸಿದ್ದು ಉಲ್ಲೇಖನೀಯ.

ಒಂದೊಂದೇ ಉದರಿ ಕಾರ್ಡ್ ಹಾಗೂ ಸಂಕೇತ ಪದಗಳನ್ನು ಕದಿಯುತ್ತ ಹೋದ ಇವರು ಅವುಗಳನ್ನು ಉಪಯೋಗಿಸುತ್ತ, ದೊರೆತ ದಾಖಲೆಗಳನ್ನು ಹಿಡಿದಿಡುತ್ತ ಮುಂದುವರಿದು ಆಯುಧ ಸಜ್ಜಿತ ಬ್ಯಾಂಕಿನ ಬಿಡಿಭಾಗಗಳನ್ನು ಪೂರೈಸುವ ಕಂಟ್ರಾಕ್ಟರೊಬ್ಬರ ದೂರವಾಣಿ ಸಂಖ್ಯೆಯನ್ನು ಕಂಡು ಹಿಡಿದು ಅದರ ಪೂರ್ಣ ಪ್ರಯೋಜನವನ್ನು ಉಪಗ್ರಹ ಸಂಪರ್ಕಕ್ಕೆ ಬಳಸಿ ವಿವರವನ್ನು ಪ್ರಕಟಿಸಿದರು. ತತ್‌ಕ್ಷಣ ಇವರನ್ನು ದಸ್ತಗಿರಿ ಮಾಡಲಾಯಿತೆಂಬುದು ಬೇರೆ ವಿಚಾರ. ಇಂತಹವರುಗಳ ಸಂಘವೊಂದು ಅಮೆರಿಕದಲ್ಲಿ ರೂಪುಗೊಂಡಿದ್ದು, ಅಲ್ಲಿಗೆ ಪ್ರವೇಶ ಪಡೆಯಬಯುಸುವವರು ದುಸ್ಸಾಹಸಗಳನ್ನೆಸಗಿ, ಅಮೂಲ್ಯ ಮಾಹಿತಿಯನ್ನು ಸ್ವತಂತ್ರವಾಗಿ ಸಂಗ್ರಹಿಸಬೇಕಾಗುತ್ತದೆ. ಅನಂತರವೇ ಸಂಘದಲ್ಲಿ ಪ್ರವೇಶ. ಸಂಘದ ಗಣಕಜಾಲಕ್ಕೆ ತಮ್ಮ ಗಣಕವನ್ನು ಜೋಡಿಸಲಗತ್ಯವಾದ ಸೆಸೇಮ ರಹಸ್ಯವನ್ನು ತಿಳಿಸಲಾಗುತ್ತದೆ. ಇವರ ವ್ಯವಸ್ಥೆಯನ್ನು ಭೇದಿಸುವುದು ದುಸ್ಸಾಧ್ಯವೆನಿಸಿದೆ. ಇಂತಹ ಸಂಘದ ಸದಸ್ಯರನ್ನು ಪತ್ತೆ ಹಚ್ಚಿದ ನ್ಯೂಸ್ ವೀಕ್ ಪತ್ರಿಕೆಯ ವರದಿಗಾರರ ಉದರಿ ಕಾರ್ಡ್ ಹಾಗೂ ಸಾಮಾಜಿಕ ಭದ್ರತಾ ಕಾರ್ಡುಗಳ ಸಂಖ್ಯೆಗಳನ್ನು ಕದ್ದು ಪ್ರಕಟಣೆ ಮಾಡಲಾಯಿತು.

ಇವನ್ನೆಲ್ಲ ಮೀರಿ ಕೂಡ ಬ್ಯಾಂಕುಗಳ ಗಣಕಗಳಿಗೆ ರಕ್ಷಣಾ ಕ್ರಮಗಳನ್ನು ರೂಪಿಸುವುದು ಸಾಧ್ಯ. ಸರಿಯಾದ ನಿಟ್ಟಿನಲ್ಲಿ ಬ್ಯಾಂಕುಗಳು ಕಾರ್ಯಪ್ರವೃತ್ತವಾಗಬೇಕು ಅಷ್ಟೆ.

### ತೀರುವೆ ವ್ಯವಸ್ಥೆ

ಸಿಬ್ಬಂದಿ ವರ್ಗದಿಂದ ಹೆಚ್ಚಿನ ಪ್ರತಿರೋಧವಿಲ್ಲದೆ ತೀರುವೆ ವ್ಯವಸ್ಥೆಯ ಗಣಕೀಕರಣವನ್ನು ಹಂತಹಂತವಾಗಿ ಸಾಧಿಸಲಾಗುತ್ತಿದೆ. ಸದ್ಯ ದೇಶದ ನಾಲ್ಕು ಪ್ರಮುಖ ನಗರಗಳಲ್ಲಿ – ಕಲ್ಕತ್ತ, ಬೊಂಬಾಯಿ, ಅಹ್ಮದಾಬಾದು ಹಾಗೂ ದೆಹಲಿ. ಕಾಂತೀಯ ಮಸಿಲಿಪಿಗ್ರಹಣ ಚೆಕ್ಕುಗಳನ್ನು ಗಣಕದ ಮೂಲಕ ತೀರುವೆ ಮಾಡಲಾಗುತ್ತದೆ. ಇದು ಇಷ್ಟರಲ್ಲಿಯೇ ದೇಶದ ಇತರ ಪ್ರಮುಖ ಕೇಂದ್ರಗಳಿಗೂ ವಿಸ್ತರಣೆಯಾಗುತ್ತದೆ. ಆದರೆ ಅಂತರ ನಗರ ತೀರುವೆ ವ್ಯವಸ್ಥೆಯನ್ನು ಗಣಕೀಕರಿಸಿದಾಗ ಮಾತ್ರ ತೀರುವೆ ವ್ಯವಸ್ಥೆಯು ಸಮಗ್ರ ಗಣಕೀಕರಣವಾದಂತಾಗಿ, ಗ್ರಾಹಕರಿಗೆ ನಿಜವಾದ ಲಾಭ ದೊರಕದಂತಾಗುತ್ತದೆ.

### ಗ್ರಾಹಕ ಸೇವೆ, ಗಣಕ ಜಾಲಗಳು

ಗಣಕೀಕರಣದಿಂದ ಬ್ಯಾಂಕುಗಳಿಗೆ ಅನೇಕ ಪ್ರಯೋಜನಗಳಿವೆ. ಆಡಳಿತಾತ್ಮಕವಾಗಿ, ಅದಕ್ಕಿಂತ ಹೆಚ್ಚಾಗಿ ಗ್ರಾಹಕರಿಗೆ, ಅವು ಗಣಕಗಳ ಉಪಯುಕ್ತತೆಯನ್ನು ತಲುಪಿಸಬಲ್ಲವು. ಗ್ರಾಹಕರ ಪ್ರಮುಖ ದೂರುಗಳಾದ, ಖಾತೆಯ ಲೆಕ್ಕ ತಃಖ್ತೆಗಳು, ಅವುಗಳಲ್ಲಿನ ದೋಷಗಳು, ಸ್ಥಳೀಯ ತೀರುವೆ ಹಾಗೂ ಸೇವಾ ವಿಳಂಬ ಇವುಗಳನ್ನು ಖಂಡಿತವಾಗಿ ಬ್ಯಾಂಕುಗಳು ಸುಲಭವಾಗಿ ಪರಿಹರಿಸಬಲ್ಲವು.

ಸ್ವಯಂಚಲೀ ಟೆಲ್ಲರ್ ಯಂತ್ರ(ATM) ಹಾಗೂ ಗಣಕ ಜಾಲದ ಸದಸ್ಯತ್ವಗಳು ಗ್ರಾಹಕರಿಗೆ ಮತ್ತಷ್ಟು ಪ್ರಯೋಜಕವಾಗಬಲ್ಲವು. ಮೊದಲನೆಯದು ನಗದು ಪಡೆದುಕೊಳ್ಳುವಲ್ಲಿ ಎಲ್ಲ ಗ್ರಾಹಕರಿಗೂ ಉಪಯುಕ್ತವಾದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಅವನ್ನು ಅಳವಡಿಸಬೇಕಾಗುತ್ತದೆ. ಎರಡನೆಯದು ಗ್ರಾಹಕರಿಗೇ ಗಣಕವನ್ನು ಪೂರೈಸಿ, ತಮ್ಮ ಗಣಕಜಾಲದೊಂದಿಗೆ ಸಂಪರ್ಕಿಸುವುದರ ಮೂಲಕ ಗ್ರಾಹಕರು ತಾವಿರುವಲ್ಲಿಂದಲೇ ಬ್ಯಾಂಕಿಂಗ್ ವ್ಯವಹಾರಗಳನ್ನು ನಡೆಸಲು ಅನುವು ಮಾಡಿಕೊಡುತ್ತದೆ. ಇದಕ್ಕೆ ಸಾಕಷ್ಟು ಬೇಡಿಕೆ ಬರಬೇಕು ಅಷ್ಟೆ. ಮುಂಬಯಿಯಲ್ಲಿ ಈಚೆಗೆ ವಿದೇಶಿ ಬ್ಯಾಂಕೊಂದು (Chartered Bank) ಈ ವ್ಯವಸ್ಥೆಯನ್ನು ಪ್ರಾರಂಭಿಸಿದೆ. ಭಾರತೀಯ ಬ್ಯಾಂಕುಗಳೂ ಇದನ್ನು ಅನುಸರಿಸಿದರೆ ಆಶ್ಚರ್ಯವೇನಿಲ್ಲ.

### ಭವಿಷ್ಯ

ಭಾರತದಲ್ಲಿ ವಿದ್ಯುನ್ಮಾನ ಬ್ಯಾಂಕಿಂಗಿನ ಪ್ರಗತಿ ವಿದ್ಯುದ್ವೇಗದಲ್ಲಿಲ್ಲ ನಿಜ. ಆದರೆ ಭವಿಷ್ಯದಲ್ಲಿ ಮಾತ್ರ ನಿಧಾನ ಸಲ್ಲ. ಒಮ್ಮೆ ನಾವು ವಿದ್ಯುನ್ಮಾನ ಯುಗಕ್ಕೆ ಕಾಲಿಟ್ಟೆವೆಂದರೆ ಅದೇ ನಮ್ಮನ್ನು ವೇಗವಾಗಿ ಮುಂದಕ್ಕೆ ಕೊಂಡೊಯ್ಯುತ್ತದೆ. ಹಿಂದಿನ ವ್ಯವಸ್ಥೆಗೆ ನಾವು ವಾಪಸಾಗಲಾರೆವು. ಈ ನಿಟ್ಟಿನಲ್ಲಿ ನಮ್ಮ ಯೋಜನೆಗಳನ್ನು ರೂಪಿಸಬೇಕಾಗುತ್ತದೆ.

ಭಾರತೀಯ ಸ್ಟೇಟ್ ಬ್ಯಾಂಕು ಕ್ರಿ.ಶ. ೨೦೦೦ದ ವೇಳೆಗೆ ಉಪಗ್ರಹದ ಮೂಲಕ ತನ್ನೆಲ್ಲ ಶಾಖೆಗಳನ್ನು ಒಂದು ಗಣಕಜಾಲದಲ್ಲಿ ಒಗ್ಗೂಡಿಸುವ ಮಹತ್ವಾಕಾಂಕ್ಷೆಯ ಕಾರ್ಯಕ್ರಮವನ್ನು ಹಾಕಿಕೊಂಡಿದೆಯಂತೆ.

ಇದಕ್ಕೆ ತಗಲುವ ವೆಚ್ಚವನ್ನು ಗ್ರಾಹಕರು ಭರಿಸಬೇಕಲ್ಲ ಎಂದರೆ, ಸೇವೆ ಉತ್ತಮಗೊಂಡರೆ ಗ್ರಾಹಕರು ಅದರ ವೆಚ್ಚವನ್ನು ಭರಿಸಲು ಅಷ್ಟಾಗಿ ಚಿಂತಿಸುವುದಿಲ್ಲ. ಇದು ಎಲ್ಲ ಕ್ಷೇತ್ರದಲ್ಲಿಯೂ ನಿಜ.

ನಮ್ಮ ವಿದ್ಯುನ್ಮಾನ ಬ್ಯಾಂಕಿಂಗ್ ತನ್ನ ಎಲ್ಲ ಆರಂಭಿಕ ಚಡಪಡಿಕೆಗಳನ್ನು, ಗೊಂದಲಗಳನ್ನು ನಿವಾರಿಸಿಕೊಂಡು ವಿದ್ಯುನ್ಮಾನ ಬ್ಯಾಂಕಿಂಗಿನಲ್ಲಿಯೇ ತನ್ನ ಉಜ್ವಲ ಭವಿಷ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದರಲ್ಲಿ ಸಂದೇಹವೇ ಇಲ್ಲ. ಭಾರತದ ಗ್ರಾಹಕರಿಗೆ ಇದರ ಲಾಭ ದೊರಕಲಿ.

*ಬ್ಯಾಂಕಿಂಗ್ ಪ್ರಪಂಚ – ಮಾರ್ಚ್ ೧೯೮೭*

# ಹೊಸ ಆರ್ಥಿಕ ನೀತಿ

ಪ್ರತಿಯೊಂದು ದೇಶವೂ ಆಗೊಮ್ಮೆ ಈಗೊಮ್ಮೆ ಸತ್ವಕ್ಕೆ ಮುಖಾಮುಖಿಯಾಗಿ ನಿಲ್ಲಬೇಕಾಗುತ್ತದೆ. ಇತ್ತ ದರಿ, ಅತ್ತ ಪುಲಿ ಎಂಬ ಪರಿಸ್ಥಿತಿಯನ್ನು ತಂದೊಡ್ಡಿಕೊಳ್ಳಬೇಕಾಗುತ್ತದೆ. ಏನು ಮಾಡಿದರೂ ಕಷ್ಟ, ಮಾಡದಿದ್ದರೂ ಅಪಾಯ ಎಂದು ತವಕಿಸಬೇಕಾಗುತ್ತದೆ. ಹೇಗಾದರೂ ಟೀಕೆ ಅನುಭವಿಸಬೇಕಾಗುತ್ತದೆ.

ನಮ್ಮ ದೇಶ ಆರ್ಥಿಕ ಕ್ಷೇತ್ರದಲ್ಲಿ ಈಚೆಗೆ ಈ ಬಗೆಯ ಪರಿಸ್ಥಿತಿಯನ್ನೆದುರಿಸಬೇಕಾಗಿತ್ತು. ರಾಜಕೀಯ ಅಸ್ಥಿರತೆ ಉಂಟಾಗಿತ್ತು. ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ಯಾವುದೋ ಒಂದು ದಿಕ್ಕಿನಲ್ಲಿ ಸಾಗಿ, ಅದರೊಳಗಿನ ವೈರುಧ್ಯಗಳನ್ನು ಆಗಿಂದಾಗಲೇ ಗಮನಿಸದೆ ಮತ್ತು ಅವಕ್ಕೆ ಆಗಾಗಲೇ ಪರಿಹಾರಗಳನ್ನು ನಿಯೋಜಿಸದೆ ಇದ್ದುದರ ಫಲವಾಗಿ ಕೂಡಿಕೊಂಡು ಬಂದ ಸಮಸ್ಯೆ, ಅಂತರರಾಷ್ಟ್ರೀಯ ಪರಿಸ್ಥಿತಿ, ಪ್ರಗತಿಪ್ರಿಯರಿಗೆಲ್ಲ ಆದರ್ಶವೆನಿಸಿದ್ದ ಸೋವಿಯತ್ ವ್ಯವಸ್ಥೆಯೇ ಇಸ್ಪೀಟೆಲೆಗಳಿಂದ ಕಟ್ಟಿದ ಕನಸಿನ ಗೋಪುರದಂತೆ ಕುಸಿದುಬಿದ್ದುದರಿಂದ ಉಂಟಾದ ಮಾನಸಿಕ ಪರಿಣಾಮ-ಇವೆಲ್ಲದರ ಫಲವೋ ಎಂಬಂತೆ ಭಾರತದ ಅರ್ಥ ವ್ಯವಸ್ಥೆಯೂ ಕವಲುದಾರಿಯ ಬಳಿಗೆ ಬಂದು ನಿಂತಿತ್ತು.

ಏಳನೆಯ ಯೋಜನೆಯ ಅವಧಿಯಲ್ಲಿ ನಮ್ಮ ಅರ್ಥ ವ್ಯವಸ್ಥೆ ಹಿಂದೂ ಬೆಳವಣಿಗೆಯ ದರವೆಂದು ಕುಖ್ಯಾತಿ ಗಳಿಸಿದ್ದ ಶೇ. ೩.೫ರ ವಾರ್ಷಿಕ ಬೆಳವಣಿಗೆ ದರದ ಸಂಕೋಲೆಯನ್ನು ಕಡಿದುಕೊಂಡು ಶೇ. ೫.೫ ರ ಬೆಳವಣಿಗೆ ಸಾಧಿಸಿತ್ತು. ಕೃಷಿ ಕೈಗಾರಿಕಾ ಕ್ಷೇತ್ರಗಳೆರಡರಲ್ಲೂ ಸಾಧಿಸಿದ ಬೆಳವಣಿಗೆಯಿಂದ ಆಶಾವಾದ ತಲೆಯೆತ್ತಿತ್ತು. ಮುಂದಿನ ಯೋಜನೆಯಲ್ಲಿ ಇನ್ನೂ ಮುಂದೆ ಸಾಗಬಹುದು ಎನಿಸುತ್ತಿತ್ತು.

ಆದರೆ ಇದರೊಂದಿಗೆ ಬೆಳೆದುಬಂದ ಕೆಲವು ಪ್ರವೃತ್ತಿಗಳು ಬೆದರಿಕೆ ಒಡ್ಡಿದ್ದವು. ಈ ಬೆಳವಣಿಗೆಗೆ ನಾವು ತೆರಬೇಕಾಗಿ ಬಂದ ಬೆಲೆಯೇನು ಎಂಬುದನ್ನು ಕುರಿತ ಚಿಂತೆ ಬೆಳೆದಿತ್ತು. ಆಮದಿನ ಅತಿಯಾದ ಏರಿಕೆ, ಅದೇ ದರದಲ್ಲಿ ರಫ್ತು ಹೆಚ್ಚದ ಪರಿಸ್ಥಿತಿ, ಬೆಳೆಯುತ್ತಿದ್ದ ಆಂತರಿಕ ಹಾಗೂ ಬಾಹ್ಯ ಸಾಲ, ವಿದೇಶಿ ಸಾಲ ಮರುಪಾವತಿ ಹಾಗೂ ಬಡ್ಡಿ ಪಾವತಿಗಾಗಿ ನಮ್ಮ ರಫ್ತು ಸಂಪಾದನೆಯ ಗಣನೀಯ ಭಾಗದ ವಿನಿಯೋಗ, ರೂಪಾಯಿಯ ಬಾಹ್ಯ ಮೌಲ್ಯದ ದುರ್ಬಲತೆ, ಆಂತರಿಕವಾಗಿ ನಮ್ಮ ಬಜೆಟ್ ಕೊರತೆಯ ಏರಿಕೆಯಿಂದಾಗಿ ಹಾಗೂ ಆರ್ಥಿಕ ಶಿಸ್ತಿನ ಅಭಾವದಿಂದಾಗಿ ತೀವ್ರಗೊಳ್ಳುತ್ತಿದ್ದ ಹಣದುಬ್ಬರ ಹಾಗೂ ಬೆಲೆ ಏರಿಕೆ ಇವೆಲ್ಲವೂ ಗಾಬರಿ ಹುಟ್ಟಿಸತೊಡಗಿದ್ದುವು. ಇದರ ಜೊತೆಜೊತೆಗೇ ಸಂಭವಿಸಿದ ಖಾರಿ ಬಿಕ್ಕಟ್ಟಿನಿಂದಾಗಿ ನಮ್ಮ ತೈಲ ಆಮದಿಗೆ ಪೆಟ್ಟು ಬಿತ್ತು. ಪೆಟ್ರೋಲಿಯಂ ಉತ್ಪನ್ನಗಳ ಬೆಲೆಯೇರಿಕೆಯಿಂದಾಗಿ ನಮ್ಮ ವಿದೇಶಿ ವಿನಿಮಯ ಪರಿಸ್ಥಿತಿ ಇನ್ನಷ್ಟು ಕಠಿಣವಾಯಿತು. ಪಶ್ಚಿಮ ಏಷ್ಯಾ ಪ್ರದೇಶದಿಂದ ಹರಿದು ಬರುತ್ತಿದ್ದ ಅನಿವಾಸಿ ಭಾರತೀಯರ ವಿದೇಶಿ ವಿನಿಮಯದ ಧಾರೆಗೂ ಕಡಿತ ಬಿತ್ತು. ರೂಪಾಯಿಯ ಅಸ್ಥಿರತೆಯಿಂದಾಗಿಯೂ, ಭಾರತದ ವಿದೇಶಿ ಪಾವತಿ ಪರಿಸ್ಥಿತಿ ಬಲು ಸೂಕ್ಷ್ಮವಾದ್ದರಿಂದಲೂ ಭಾರತ ತನ್ನ ವಾಗ್ದಾನಗಳನ್ನು ಪೂರೈಸಲಾರದೆಂಬ ಶಂಕೆ ಉದ್ಭವಿಸಿದ್ದರಿಂದಲೂ ಭಾರತದಲ್ಲಿ ವಿನಿಯೋಗವಾಗಿದ್ದ ವಿದೇಶಿ ಬಂಡವಾಳ ಇಲ್ಲಿಂದ ಪಲಾಯನ ಮಾಡುವ ಪ್ರವೃತ್ತಿ ತೋರಿತ್ತು. ಅನಿವಾಸಿ ಭಾರತೀಯರು ತಮ್ಮ ಹಣವನ್ನು ಇಲ್ಲಿಂದ ವಾಪಸು ಪಡೆದುಕೊಳ್ಳುವ ಮನಸ್ಸುಳ್ಳವರಾದರು. ಭಾರತದ ಸಾಲ ಮರುಪಾವತಿ ಸಾಮರ್ಥ್ಯದ ಮೇಲೆ ಕಣ್ಣಿಟ್ಟ ಪರಿಣತ ಅಂತರರಾಷ್ಟ್ರೀಯ ಸಂಸ್ಥೆಗಳು ಅಪಾಯದ ಬಾವುಟ ಹಾರಿಸಿದುವು. ಇನ್ನು ಮೇಲೆ ಭಾರತಕ್ಕೆ ಸಾಲ ನೀಡುವವರು ಎಚ್ಚರಿಕೆಯಿಂದಿರಬೇಕು, ಮುಂದೆ ನೀಡುವ ಸಾಲ ಸುಭದ್ರ ವಿನಿಯೋಜನೆಯೆನಿಸದು. ಸಟ್ಟಾ ಎನಿಸಿಕೊಂಡೀತು ಎಂದು ಅವು ತಮ್ಮದೇ ಆದ ಪರಿಭಾಷೆಯಲ್ಲಿ ಸಾರಿದುವು. ಭಾರತದ ಋಣಪ್ರತ್ಯಯ ತೀರ ಕೆಳಮಟ್ಟಕ್ಕೆ ಜಾರುತ್ತಿದೆ ಎಂದುವು. ಮಾಮೂಲಾಗಿ ಹುಟ್ಟುತ್ತಿದ್ದ ಸಾಲವೂ ಹುಟ್ಟದ ಸ್ಥಿತಿ ಒಂದು ಕಡೆ. ಕೊಡಬೇಕಾದ ಸಾಲ ಕೊಡಲಾಗದಂಥ ಸಂಕಟ ಮತ್ತೊಂದು ಕಡೆ. ಸಾಲ ಮರುಪಾವತಿಯ ಕಂತು ತಪ್ಪಿಸಿದರೆ ಮುಂದೆ ಇನ್ನೂ ಸಂಕಷ್ಟ ಒದಗೀತೆಂಬ ಭಯ ಕಾತರ ಮಗದೊಂದು ಕಡೆ ಹೀಗೆ ಮೂರಾಬಟ್ಟೆಯಾಗಿ ಭಾರತ ತೊಳಲಾಡತೊಡಗಿತ್ತು.

ತತ್‌ಕ್ಷಣದಲ್ಲಿ ಮಾಡಬೇಕಾಗಿ ಬಂದ ಪಾವತಿಗಳನ್ನು ಪೂರೈಸಲೂ ಸಾಕಷ್ಟು ವಿದೇಶಿ ಹಣ ಲಭ್ಯವಿರಲಾರದೆಂಬ ಆಂಜಿಕೆ ಮೂಡಿತ್ತು. ವಾಣಿಜ್ಯ ವಲಯಗಳಿಂದಲೂ, ಅಧಿಕ ಬಡ್ಡಿ ದರಗಳಲ್ಲಿ ಕೂಡ, ಕಡ ದೊರಕದೆಂಬ ಸ್ಥಿತಿ ಉಂಟಾದಾಗ ಸದ್ಯದ ದರದು ಪೂರೈಕೆಗಾಗಿ ಸರ್ಕಾರ ತನ್ನಲ್ಲಿದ್ದ ಚಿನ್ನವನ್ನು ಪರಭಾರೆ ಮಾಡುವ ಅನಿವಾರ್ಯ ಪರಿಸ್ಥಿತಿ ಉಂಟಾಯಿತು. ಸರ್ಕಾರ ಹಿಡಿದಿಟ್ಟುಕೊಂಡ ಕಳ್ಳಸಾಗಣೆ ಚಿನ್ನದ ದಾಸ್ತಾನಿನಲ್ಲಿ ಇಪ್ಪತ್ತು ಟನ್ ಕೈ ಬಿಟ್ಟು ಹೋಯಿತು. ಆರು ತಿಂಗಳ ಅನಂತರ ಅದೇ ಬೆಲೆಯಲ್ಲಿ ಆ ಚಿನ್ನವನ್ನು ಮತ್ತೆ ಕೊಳ್ಳಬಹುದೆಂಬ ಭರವಸೆಯ ಮೇಲೆ ಇದನ್ನು ಮಾರಲಾಯಿತು. ಅನಂತರ ಮತ್ತೆ ನಾಲ್ಕು ಕಂತುಗಳಲ್ಲಿ ಒಟ್ಟು

೪೬.೯ ಟನ್ ಚಿನ್ನ ಇಲ್ಲಿಂದ ಲಂಡನ್ನಿಗೆ ಸಾಗಿತು. ಅಲ್ಲಿ ಇದನ್ನು ಒತ್ತೆಯಾಗಿ ಇಟ್ಟು ಡಾಲರ್ ಸಾಲ ಪಡೆಯುವ ಅವಕಾಶವನ್ನು ರಿಸರ್ವ್ ಬ್ಯಾಂಕ್ ಪಡೆದುಕೊಂಡಿತು. ರಿಸರ್ವ್ ಬ್ಯಾಂಕ್ ತನ್ನ ಮೀಸಲು ಚಿನ್ನದಲ್ಲಿ ಶೇ. ೧೫ ರಷ್ಟನ್ನು ದೇಶದ ಹೊರಗಡೆ ಇಡಬಹುದೆಂಬ ಉಪಬಂಧವಿರುವುದು ನಮಗೆ ಈ ನಿಟ್ಟಿನಲ್ಲಿ ಅನುಕೂಲವಾಗಿ ಒದಗಿ ಬಂದಿತ್ತು.

ಇದೆಲ್ಲಾ ಬೀಸುವ ದೊಣ್ಣೆಯ ಪೆಟ್ಟು ತಪ್ಪಿಸಿಕೊಳ್ಳುವ ಪ್ರಯತ್ನ. ಏನೇ ಆಗಲಿ, ದೇಶ ತನ್ನ ಮಾತನ್ನು ಉಳಿಸಿಕೊಳ್ಳದೆ ಇರದು ಎಂಬುದನ್ನು ತೋರ್ಪಡಿಸಿಕೊಳ್ಳುವುದು ಅಗತ್ಯವಾಗಿತ್ತು. ಆದರೆ ಮುಂದಿನ ಕ್ರಮವೇನು? ಇಂಥ ಸಂಕಟಸಮಯದಲ್ಲಿ ನೆರವಿಗೆ ಬರಲೆಂದೇ ಸ್ಥಾಪಿತವಾದ ಅಂತರರಾಷ್ಟ್ರೀಯ ಹಣ ನಿಧಿಯಿಂದ ಸಾಲ ಪಡೆಯಲು ಯತ್ನ ಮುಂದುವರಿದೇ ಇತ್ತು. ಆದರೆ ಸತತವಾಗಿ ಕೊರತೆಯಲ್ಲೇ ಇರುವ ವಿದೇಶಿ ಪಾವತಿ ಪರಿಸ್ಥಿತಿಯನ್ನು ಸರಿಪಡಿಸಿಕೊಳ್ಳುವ ಕ್ರಮವೇನು? ಪದೇ ಪದೇ ನಿಮ್ಮ ಮೈಮೇಲೆ ಈ ಪರಿಸ್ಥಿತಿಯನ್ನು ಒಡ್ಡಿಕೊಳ್ಳದಂತೆ ನಿಮ್ಮ ಆರ್ಥಿಕತೆಯನ್ನು ಪುನಸ್ಸಂರಚಿಸುವ ಯತ್ನ ಮಾಡಿ ಎಂಬುದು ಇಂಥ ಸಂದರ್ಭಗಳಲ್ಲಿ ಹಣ ನಿಧಿ ನೀಡುವ ಸಲಹೆ. ದೀರ್ಘಕಾಲದಿಂದ ಮುಂದುವರಿದ ಕೃತಕ ವ್ಯವಸ್ಥೆಗಳನ್ನೂ ಕಟ್ಟುಪಾಡುಗಳನ್ನೂ ದಿಗ್ಬಂಧನಗಳನ್ನೂ ಕಿತ್ತೊಗೆದು ಅರ್ಥ ವ್ಯವಸ್ಥೆ ಸಲೀಸಾಗಿ ಉಸಿರಾಡುವಂತೆ ಮಾಡಬೇಕು ಎಂಬ ಹಣ ನಿಧಿಯ ಸಲಹೆಗೆ ಮಣಿದು ಸರ್ಕಾರ ಹೀಗೆ ಮಾಡಿತೋ, ಇಲ್ಲವೇ ತಾನಾಗಿಯೇ ಮೂಡಿದ ಅರಿವಿನಿಂದ ಹೀಗೆ ಮಾಡಿತೋ ಅಂತೂ ಅದು ಅನೇಕ ಮೂಲಭೂತ ಬದಲಾವಣೆಗಳನ್ನು ಮಾಡಲು ಮುಂದಾಯಿತು. ಮೊದಲನೆಯದಾಗಿ ಎರಡು ಹಂತಗಳಲ್ಲಿ ರೂಪಾಯಿಯ ಬಾಹ್ಯ ಮೌಲ್ಯವನ್ನು ಶೇ. ೧೮ಕ್ಕೂ ಹೆಚ್ಚಾಗಿ ಕೊಚ್ಚಿಹಾಕಿತು. ಇದರಿಂದ ಭಾರತದ ಸರಕುಗಳನ್ನು ಅನ್ಯ ದೇಶಗಳಿಗೆ ಅಗ್ಗವನಿಸಿ ರಫ್ತು ಹೆಚ್ಚುವುದೆಂಬುದು ತರ್ಕ. ರೂಪಾಯಿಯ ಇದರಿನಲ್ಲಿ ಇತರ ನಾಣ್ಯಗಳು ದುಬಾರಿ ಎನಿಸುವುದರಿಂದ ಆಮದೂ ದುಬಾರಿಯಾಗಿ ತಂತಾನೇ ಅದು ಕಡಿಮೆಯಾಗುವುದೆಂಬುದೂ ನಿರೀಕ್ಷೆ. ಆಮದಿಗೆ ಇದ್ದ ನಿರ್ಬಂಧಗಳನ್ನೂ ಕಿತ್ತು ಹಾಕಲಾಯಿತು. ರಫ್ತು ಮಾಡಿದರೆ ಆಮದಿಗೆ ಅವಕಾಶ ಎಂಬುದು ಹೊಸ ದರ್ಶನ.

ಜೊತೆ ಜೊತೆಗೇ ಸರ್ಕಾರ ನಮ್ಮ ಕೈಗಾರಿಕ ನೀತಿಯನ್ನೂ ಮೂಲಭೂತವಾಗಿ ಮಾರ್ಪಡಿಸಿದೆ. ಸರ್ಕಾರಿ ಉದ್ಯಮ ವಲಯದ ಯಜಮಾನಿಕೆ ಇರುವ ಮಿಶ್ರ ಅರ್ಥ ವ್ಯವಸ್ಥೆ ನಮ್ಮದಾಗಿತ್ತು. ಮೂಲ ಕೈಗಾರಿಕೆಗಳು ಸರ್ಕಾರಿ ವಲಯದಲ್ಲಿ ಬೆಳೆಯಬೇಕೆಂಬುದೂ ಆ ವಲಯಕ್ಕೆ ಮೀಸಲಾಗಿರದ ಉಳಿದವು ಖಾಸಗಿ ವಲಯದಲ್ಲಿರಬಹುದೆಂಬುದೂ ಸುಮಾರು ನಲವತ್ತು ವರ್ಷಗಳಿಂದ ನಡೆದು ಬಂದ ಕೈಗಾರಿಕಾ ನೀತಿಯ ಸಾರಭೂತ ಅಂಶ. ಯಾವ ಕೈಗಾರಿಕೆಯನ್ನು ಸ್ಥಾಪಿಸಬೇಕು. ಯಾವುದನ್ನು ಸ್ಥಾಪಿಸಬಾರದು. ಯಾವುದು ಎಷ್ಟು ಬೆಳೆಯಬೇಕು ಎಂಬ ತೀರ್ಮಾನವನ್ನು ಖಾಸಗಿಯವರಿಗೆ ಬಿಟ್ಟರೆ ದೇಶಕ್ಕೆ ಅಗತ್ಯವಾದ ಕೈಗಾರಿಕೆಗಳು ಬೆಳೆಯದೆ ಹೋಗಬಹುದು. ಖಾಸಗಿ ಒಡೆತನದ ಉದ್ಯಮಗಳು ಅಡ್ಡಾದಿಡ್ಡಿ ಬೆಳೆದು ಸಂಪತ್ತು ಕೆಲವರಲ್ಲೇ ಕೇಂದ್ರೀಕೃತವಾಗಬಹುದು. ಸಮಾಜದ ಹಿತಕ್ಕೆ ಇದರಿಂದ ಧಕ್ಕೆ ಉಂಟಾಗಬಹುದು ಎಂಬ ಚಿಂತನೆಯೇ ಈ ಕೈಗಾರಿಕಾ ನೀತಿಗೆ ಪ್ರೇರಣೆ. ಈ ನಲವತ್ತು ವರ್ಷಗಳಲ್ಲಿ ಸರ್ಕಾರಿ ವಲಯದ ಉದ್ಯಮಗಳು ಅಗಾಧವಾಗಿ ಬೆಳೆದಿವೆ. ಆರ್ಥಿಕ ಅಧೋರಚನೆಯ ನಿರ್ಮಾಣ ಗಮನಾರ್ಹವಾಗಿ ಸಾಧ್ಯವಾಗಿದೆ.

ಆದರೆ ಯಾರು ಯಾವ ಕೈಗಾರಿಕೆ ಸ್ಥಾಪಿಸಬೇಕು. ಎಷ್ಟರಮಟ್ಟಿಗೆ ಅದನ್ನು ಬೆಳೆಯಗೊಡಬೇಕು, ಉತ್ಪಾದನೆ ಎಷ್ಟಾಗಬೇಕು, ಬಂಡವಾಳ ಯಾವ ಮಿತಿಗೆ ಒಳಪಟ್ಟಿರಬೇಕು ಎಂಬುದನ್ನೆಲ್ಲ ನಿರ್ಣಯಿಸುವ ಸರ್ಕಾರದ ವ್ಯವಸ್ಥೆ ದಕ್ಷವೂ ನಿರ್ದುಷ್ಟವೂ ನಿಷ್ಪಕ್ಷಪಾತಿಯೂ ಆಗಿದ್ದಲ್ಲಿ ಮಾತ್ರ, ಅದರ ತೀರ್ಮಾನಗಳು ವೈಜ್ಞಾನಿಕವಾಗಿದ್ದಾಗ ಮಾತ್ರ, ಇದೆಲ್ಲ ಯಶಸ್ವಿಯಾಗುವುದು ಸಾಧ್ಯ. ಪರವಾನೆ-ಅನುಮತಿಗಳ ಆಡಳಿತದಿಂದ ಅನೈತಿಕ ಬೆಳವಣಿಗೆಗಳಾದುವು. ಸ್ಪರ್ಧಾತ್ಮಕವಾಗಿ ಕೈಗಾರಿಕೆ ಬೆಳೆಯಲಾರದೆ ಹೋಯಿತು. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ನಮ್ಮ ಕೈಗಾರಿಕೆಗಳು ಸ್ಪರ್ಧಿಸಲಾರವಾದುವು. ಡಿನೋಸಾರುಗಳಂತೆ ಬೆಳೆದ ಸರ್ಕಾರಿ ವಲಯದ ಉದ್ಯಮಗಳೆಲ್ಲ ಲಾಭಪ್ರದವಾಗಲಿಲ್ಲ. ಈ ಕೈಗಾರಿಕೆಗೆಲ್ಲ ಲಾಭದೃಷ್ಟಿಯನ್ನೇ ತಳೆದಿರಬೇಕಾಗಿಲ್ಲವಾದರೂ, ಇವುಗಳ ದಕ್ಷತೆಯನ್ನಳೆಯಲು ಸರಿಯಾದ ಮಾನಗಳು (ನಾರ್ಮ್ಸ್) ಇಲ್ಲದ್ದರಿಂದಾಗಿ ಇವು ಸರ್ಕಾರಕ್ಕೆ ಹೊರೆಯಾದುವು. ಬೆಳವಣಿಗೆ ಹಾಗೂ ಅಭಿವೃದ್ಧಿಗೆ ಅಗತ್ಯವಾದ ಸಂಪನ್ಮೂಲಗಳನ್ನು ಆಂತರಿಕವಾಗಿ ಸಂಪಾದಿಸಿಕೊಳ್ಳಲಾರದ ಈ ಉದ್ಯಮಗಳು ಸರಕಾರದ ಬಜೆಟ್ ಕೊರತೆ ಹೆಚ್ಚಲು ಕಾರಣವಾದುವು.

ಈಗಿನ ಸರ್ಕಾರದ ಹೊಸ ಕೈಗಾರಿಕಾ ನೀತಿ ಒಮ್ಮಿಂದೊಮ್ಮೆಲೇ ಈ ಎಲ್ಲ ಕಟ್ಟುಪಾಡುಗಳನ್ನೂ ಸಡಿಲಿಸಿದೆ. ಬಹುತೇಕ ಕೈಗಾರಿಕೆಗಳ ಸ್ಥಾಪನೆ ವಿಸ್ತರಣೆಗಳಿಗೆ ಲೈಸೆನ್ಸ್ ಇನ್ನು ಮುಂದೆ ಅಗತ್ಯವಿಲ್ಲ. ಏಕಸ್ವಾಮ್ಯ ಮತ್ತು ನಿರ್ಬಂಧಕ ವ್ಯಾಪಾರ ಪದ್ಧತಿಗಳ ಅಧಿನಿಯಮದ ವಿಧಿನಿಯಮಗಳೂ ಸಡಿಲವಾಗಿವೆ. ಗುಣಮಟ್ಟಕ್ಕೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಹಲವು ಉದ್ಯಮಗಳಲ್ಲಿ ವಿದೇಶಿ ಬಂಡವಾಳವನ್ನು ಶೇ. ೫೧ರವರೆಗೂ ಬರಮಾಡಿಕೊಳ್ಳಬಹುದು. ರಫ್ತಿಗಾಗಿಯೇ ಸ್ಥಾಪಿತವಾದ ಉದ್ಯಮಗಳಲ್ಲಿ ನೂರಕ್ಕೆ ನೂರರಷ್ಟೇ ವಿದೇಶಿ ಬಂಡವಾಳವಿದ್ದರೂ ಚಿಂತೆಯಿಲ್ಲ ಎಂಬ ಭಾವನೆ ವ್ಯಕ್ತವಾಗಿದೆ. ಬಂಡವಾಳ ಸರಕು, ತಂತ್ರಜ್ಞಾನ ಮತ್ತು ಕಚ್ಚಾ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳಬೇಕಾದರೆ ವಿದೇಶಿ ವಿನಿಮಯ ಬೇಕು. ಆದರೆ ವಿದೇಶಿ ಬಂಡವಾಳವೇ ಬಂದರೆ ಅದರ ಒಡೆಯರು ತಾವಾಗಿಯೇ ಯಂತ್ರ ತಂತ್ರ ಸಾಮಗ್ರಿಗಳನ್ನು ತರುತ್ತಾರೆ. ಪರೋಕ್ಷವಾಗಿ ಇದು ವಿದೇಶಿ ವಿನಿಮಯದ ಕೊರತೆಯ ಪರಿಹಾರಕ್ಕೆ ಒಂದು

ಉಪಾಯ ಎಂದು ಸರ್ಕಾರ ಭಾವಿಸಿದೆ. ಇದರಿಂದ ನಮ್ಮ ಉದ್ಯಮಗಳು ಪಾಶ್ಚಾತ್ಯ ಹಿತಗಳಿಗೆ ಆಧೀನವಾಗುವುವೆಂಬುದಾಗಿ ಸರ್ಕಾರ ಭಾವಿಸುವುದಿಲ್ಲ. ಅರ್ಥ ವ್ಯವಸ್ಥೆಯ ಬೆಳವಣಿಗೆ ಸಾಧ್ಯವಾಗುವುದರಿಂದ ಅಂತಿಮವಾಗಿ ನಮಗೆ ಲಾಭ ಎಂಬ ಸರಳ ನಂಬಿಕೆ ಸರ್ಕಾರದ್ದು. ಸೋವಿಯತ್ ದೇಶವೇ ಈಗ ವಿದೇಶಿ ಹಿತಗಳನ್ನು ಕೈಬೀಸಿ ಕರೆಯುವಾಗ ನಮಗೇನೂ ಅಪಾಯವಿಲ್ಲ ಎಂದೇ ಸರ್ಕಾರ ಭಾವಿಸಿರುವಂತಿದೆ.

ಸರ್ಕಾರಿ ಉದ್ಯಮಗಳನ್ನು ಖಾಸಗೀಕರಣಗೊಳಿಸಲು ಸರ್ಕಾರ ಹಿಂದೆಗೆಯದು. ಹೇಗೆ ಮತ್ತು ಯಾವ ಉದ್ಯಮಗಳನ್ನು ಎಂಬುದರ ಬಗ್ಗೆ ಚಿಂತನೆಯಿನ್ನೂ ಹೆಪ್ಪುಗಟ್ಟಬೇಕಾಗಿದೆ. ಅಂತೂ ತಾನು ಹೊತ್ತುಕೊಂಡ ಅಪಾರ ಭಾರವನ್ನು ಇಳಿಸಿ ಹಾಯಾಗಬೇಕೆಂಬ ಕಾತರ, ಸರ್ಕಾರಕ್ಕೆ. ಆ ಉದ್ಯಮಗಳು ಹೆಚ್ಚು ಸಂಪನ್ಮೂಲ ಒದಗಿಸಿಕೊಂಡು ವಿಕಾಸ ಹೊಂದಲು ಇದರಿಂದ ನೆರವಾದೀತೆಂದು ನಂಬಿಕೆ. ಸರ್ಕಾರಿ ವಲಯದಲ್ಲಿರುವ ಬ್ಯಾಂಕುಗಳ ಪ್ರಶ್ನೆಯೂ ಇದರಲ್ಲಿ ಅಡಕವಾಗಿದೆಯೆಂಬುದು ನಿರ್ವಿವಾದ.

ಸರ್ಕಾರಿ ವಲಯದ ಯಾವುದೇ ಉದ್ಯಮದ ಖಾಸಗೀಕರಣ ಎಂದೊಡನೆ ಮುಖ್ಯವಾಗಿ ಎದ್ದು ನಿಲ್ಲುವ ಸಮಸ್ಯೆಗಳು ಹಲವಾರು. ಅದರಲ್ಲಿರುವ ಉದ್ಯೋಗಿಗಳ ಭವಿಷ್ಯ ಕುರಿತದ್ದು ಒಂದು ಮುಖ್ಯ ಸಮಸ್ಯೆ. ಸರ್ಕಾರಿ ವಲಯದ ಬ್ಯಾಂಕುಗಳು ರಾಷ್ಟ್ರೀಕರಣದ ಅನಂತರದ ಈ ಎರಡು ದಶಕಗಳಿಗೂ ಹೆಚ್ಚಿನ ಅವಧಿಯಲ್ಲಿ ಗಾತ್ರದಲ್ಲಿ ಅಗಾಧವಾಗಿ ಬೆಳೆದಿದ್ದರೂ ಅವುಗಳ ದಕ್ಷತೆ, ಉತ್ಪಾದಕತೆ, ಲಾಭಪ್ರದತೆ ಸೇವಾತತ್ಪರತೆ ಸ್ಪರ್ಧಾತ್ಮಕತೆಗಳು ಅಷ್ಟೇನೂ ಹೇಳಿಕೊಳ್ಳುವಂತಿಲ್ಲ ಎಂಬುದು ಸರ್ವವಿದಿತ. ಅವು ಇಂದು ವ್ಯಾಧಿಗ್ರಸ್ತವಾಗಿವೆ. ಸರ್ಕಾರ ನೇರವಾಗಿ ಅವುಗಳ ವ್ಯವಹಾರದಲ್ಲಿ ಕೈಹಾಕುತ್ತಿರುವುದೂ, ಅವಕ್ಕೆ ಸ್ವಾಯತ್ತೆ ನೀಡದಿರುವುದೂ ಇದಕ್ಕೆ ಕಾರಣವೆನ್ನಬೇಕು. ಬ್ಯಾಂಕ್ ಶಾಖೆಗಳ ಸಂಖ್ಯೆ ಅಗಾಧವಾಗಿ ಬೆಳೆದಿದೆ. ಹಲವಾರು ಶಾಖೆಗಳು ಅನಾರ್ಥಿಕವೆನಿಸಬಹುದು. ಬ್ಯಾಂಕಿಂಗ್ ಸಂರಚನೆಯನ್ನೇ ಸುಧಾರಿಸುವ ಅಗತ್ಯವೂ ಇದೆ. ರಾಷ್ಟ್ರೀಕೃತ ಬ್ಯಾಂಕುಗಳನ್ನು ಖಾಸಗೀಕರಣಗೊಳಿಸಿದರೆ ಹೊಸ ಆಡಳಿತ ವ್ಯವಸ್ಥೆ ಅವುಗಳ ಬೊಜ್ಜು ಕರಗಿಸುವ ಕ್ರಮ ತೆಗೆದುಕೊಳ್ಳಬಹುದು. ಸೇವಾ ಭದ್ರತೆಗೆ ಪೆಟ್ಟು ಬೀಳಬಹುದು. ಸರ್ಕಾರದ ಅತಿಯಾದ ನಿಯಂತ್ರಣವುಳ್ಳ ಸರ್ಕಾರಿ ವಲಯ ಒಂದು ತುದಿಯಾದರೆ, ಲಾಭವೊಂದೇ ಗುರಿಯಾಗಿ ಉಳ್ಳ, ಉಳಿದದ್ದೆಲ್ಲವನ್ನೂ ಇದಕ್ಕೆ ಅಧೀನಗೊಳಿಸುವ, ಖಾಸಗಿ ಒಡೆತನದ ವ್ಯವಸ್ಥೆ ಇನ್ನೊಂದು ತುದಿ. ಒಂದು ತುದಿಯಿಂದ ಇನ್ನೊಂದು ತುದಿಗೆ ನೆಗೆದ ಮಾತ್ರಕ್ಕೆ ಸ್ವರ್ಗವೇ ಕೈಗೆ ಎಟುಕೀತೆಂಬ ಭ್ರಮೆಯ ಪರಿಣಾಮ ನೆಟ್ಟಗಾಗದು.

ಬ್ಯಾಂಕಿಂಗ್ ವ್ಯವಸ್ಥೆಯನ್ನು ಪುನರ್ರೂಪಿಸಬೇಕೆಂಬುದಂತೂ ನಿರ್ವಿವಾದ. ಅದನ್ನು ಖಾಸಗೀಕರಿಸುವುದಿಲ್ಲವೆಂದು ಪ್ರಧಾನಿ ಹೇಳಿದ್ದಾರೆ. ಆದರೆ ಮುಂದೆ ಅದು ಹೇಗೆ ರೂಪುಗೊಳ್ಳಬೇಕು? ಇತರ ಹಣಕಾಸು ಸಂಸ್ಥೆಗಳ ಸ್ವರೂಪ ಹೇಗಿರಬೇಕು? ಅವುಗಳ ದಕ್ಷತೆ ಮತ್ತು ಪರಿಣಾಮಕತೆಯನ್ನು ಸುಧಾರಿಸಲೂ, ಅವುಗಳ ಉತ್ತರವಾದಿತ್ವವನ್ನೂ ಲಾಭಪ್ರದತೆಯನ್ನೂ ಹೆಚ್ಚಿಸಲೂ ಏನು ಮಾಡಬೇಕು? ಬ್ಯಾಂಕುಗಳ ಆಧುನೀಕರಣ, ಸ್ಪರ್ಧಾತ್ಮಕತೆಯ ಸುಧಾರಣೆ, ಬಂಡವಾಳದ ಪೂರೈಕೆ, ವಿವಿಧ ಹಣಕಾಸು ಸಂಸ್ಥೆಗಳ ಪಾತ್ರ ಮುಂತಾದವನ್ನು ಕುರಿತು ಶಿಫಾರಸು ಮಾಡಲು ರಿಸರ್ವ್ ಬ್ಯಾಂಕಿನ ಮಾಜಿ ಗವರ್ನರ್ ಎಂ. ನರಸಿಂಹನ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ಸರ್ಕಾರ ನೇಮಕ ಮಾಡಿದೆ. ಈ ಸಮಿತಿಯ ವರದಿ ಹೇಗಿದ್ದೀತೆಂಬುದನ್ನು ಈಗಲೇ ಹೇಳಲಾಗದು.

ಅಂತೂ ಸರ್ಕಾರದ ಹೊಸ ಆರ್ಥಿಕ ನೀತಿಯ ಪರಿಣಾಮವೇನೆಂಬುದು ದೊಡ್ಡ ಪ್ರಶ್ನೆ. ರೂಪಾಯಿಯ ಮೌಲ್ಯ ಛೇದನದಿಂದ ರಫ್ತು ಎಷ್ಟು ಹೆಚ್ಚುತ್ತದೆಂಬುದು ಪ್ರಶ್ನಾರ್ಹ. ಈಗಾಗಲೇ ಮತ್ತೆ ರೂಪಾಯಿಯ ಮೌಲ್ಯ ವಾಸ್ತವವಾಗಿ ಇನ್ನಷ್ಟು ಇಳಿದಿದೆಯೆಂಬ ಸುದ್ದಿಯಿದೆ. ಆಮದುಗಳನ್ನು ಅವಲಂಬಿಸಿದ ಕೈಗಾರಿಕೆಗಳ ಉತ್ಪಾದನಾ ವೆಚ್ಚ ಹೆಚ್ಚಿದೆ. ಕೈಗಾರಿಕೆಯಲ್ಲಿ ವಿದೇಶಿ ಸಹೋದ್ಯಮ ಪ್ರವೃತ್ತಿ ಇನ್ನು ಮುಂದೆ ಬೆಳೆಯಬೇಕು. ಹಣದ ಅತಿಯಾದ ಹರಿವನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳು ಬ್ಯಾಂಕಿನ ಮೇಲೂ ಪರಿಣಾಮ ಬೀರಿವೆ. ಅಧಿಕ ಬಡ್ಡಿ ದರದಿಂದ ಬ್ಯಾಂಕುಗಳು ಹೆಚ್ಚು ಠೇವಣಿ ಆಕರ್ಷಿಸಬಹುದಾದರೂ, ಇತರ ಸಂಸ್ಥೆಗಳು ಈ ಮೇಲಾಟದಲ್ಲಿ ಬ್ಯಾಂಕಿಗಿಂತ ಉತ್ತಮ ಸ್ಥಿತಿಯಲ್ಲಿದೆ. ಭವಿಷ್ಯದ ವ್ಯವಸ್ಥೆ ಹೇಗಿದ್ದೀತೋ ಎಂಬ ಪ್ರಶ್ನೆಯಂತೂ ಇದ್ದೇ ಇದೆ.

ಸರ್ಕಾರವಂತೂ ಧೈರ್ಯದಿಂದ ಹೊಸ ನೀತಿ ಘೋಷಿಸಿದೆ. ಎಲ್ಲವೂ ಸರಿಯಾದರೆ ಇನ್ನು ಎರಡು ಮೂರು ವರ್ಷಗಳಲ್ಲಿ ಅಸಮತೋಲ ತೊಲಗಿ ಅರ್ಥ ವ್ಯವಸ್ಥೆಯ ಪುನಃ ಸಂಘಟನೆ ಸಾಧಿಸುವುದೆಂಬುದು ಸರ್ಕಾರದ ಆಶಾವಾದ. ಆದರೊಂದಿಗೇ ಬ್ಯಾಂಕುಗಳೂ ತೇಲಿ ದಡ ಸೇರಬೇಕಾಗಿದೆ. ●

*ಸಂಪಾದಕೀಯ*

*ಬ್ಯಾಂಕಿಂಗ್ ಪ್ರಪಂಚ – ಸೆಪ್ಟೆಂಬರ್ ೧೯೯೧*

# ಕೃಷಿ ಪತ್ತಿನ ಪುನರೀಕ್ಷಣ ಸಮಿತಿಯ ವರದಿ

## ಎ.ಎಮ್. ಖುಸ್ರೋ ಸಮಿತಿಯ ಶಿಫಾರಸುಗಳು

ಎಂ. ಎಂ. ವಗ್ಗನವರ

ಸುಗ್ಗಿಯಿಂದ ಸುಗ್ಗಿಗೆ ದುಡಿಯುತ್ತ, ಪ್ರತಿ ಸುಗ್ಗಿಯಲ್ಲೂ ಮುಂದಿನ ಸುಗ್ಗಿ ಹೆಚ್ಚು ಸಮೃದ್ಧವಾಗಿರುವುದೆಂದು ಕನಸು ಕಾಣುತ್ತ ಸಾಗುತ್ತಿರುವ ರೈತ ಸಾಲ ಎತ್ತುವುದಾಗಲಿ, ಅವನಿಗೆ ಸಾಲ ಕೊಡುವುದಾಗಲಿ ತಪ್ಪೇನೂ ಅಲ್ಲ. ಸದಾ ಅನಿಶ್ಚಿತತೆಗೆ ಒಳಗಾದ ಕೃಷಿಗೆ ಸಾಲ ಕೊಟ್ಟರೂ ಚಿಂತೆ, ಕೊಡದಿದ್ದರೂ ಚಿಂತೆ. ಇವೆರಡರ ನಡುವೆ ಸಾಲ ನೀಡಿಕೆಯ ಸಂಸ್ಥೆಗಳು ಹೇಗೆ ನಡೆದುಕೊಳ್ಳಬೇಕು? ಇಂಥ ಸಂಸ್ಥೆ ಹೇಗಿರಬೇಕು? ಕೃಷಿ ಉದರಿ ನೀಡಿಕೆಗಾಗಿ ಇದುವರೆಗೆ ನಡೆದಿರುವ ಪ್ರಯತ್ನಗಳನ್ನೆಲ್ಲ ವಿಮರ್ಶಿಸಿ ಇದರ ಸುಧಾರಣೆಗಾಗಿ ನೇಮಕವಾದ ಸಮಿತಿಯ ವರದಿಯ ಸಮರ್ಥ ವಿವೇಚನೆ ಇಲ್ಲಿದೆ.

ಭಾರತ ಇಂದು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ಅತಿ ಜಟಿಲವಾದದ್ದು, ಸಮಸ್ಯಾತ್ಮಕವಾದದ್ದು ಹಾಗೂ ಸಂಪೂರ್ಣವಾಗಿ ಬಗೆಹರಿಸಲು ಸಾಧ್ಯವಾಗದ ಸಮಸ್ಯೆ ಎಂದರೆ ಕೃಷಿ ಸಾಲದ ಸಮಸ್ಯೆ ಎನ್ನಬಹುದು.

ಕೃಷಿಯೂ ಒಂದು ಉದ್ದಿಮೆಯಾಗಿದೆ. ಯಾವುದೇ ಒಂದು ಉದ್ದಿಮೆಗೆ ಬೇಕಾದಂತೆ ಕೃಷಿ ಉದ್ದಿಮೆಗೂ ಬಂಡವಾಳದ ಅವಶ್ಯಕತೆ ಇರುವುದು, ಆದರೆ ಕೃಷಿ ಸಾಲ ರೈತರ ಆರ್ಥಿಕೋನ್ನತಿಯ ಉದ್ದೇಶ ಹೊಂದಿದ ಸಾಲದ ಸಂಸ್ಥೆಗಳಿಂದ ದೊರೆಯಬೇಕೇ ಹೊರತು, ಸಾಲ ಕೊಟ್ಟು ಬಡ್ಡಿ, ಚಕ್ರಬಡ್ಡಿ ಹಾಕಿ ರೈತನ ಆಸ್ತಿಪಾಸ್ತಿಗಳನ್ನು ಲಪಟಾಯಿಸುವ ಶ್ರೀಮಂತರಿಂದ ದೊರೆಯುವಂತಿರಬಾರದು.

ಪ್ರಕೃತಿಯ ವಿಕೋಪ, ಸಣ್ಣ ಅತಿ ಸಣ್ಣ ಭೂಹಿಡುವಳಿಗಳು, ಅವೈಜ್ಞಾನಿಕ ಭೂ ಸಾಗುವಳಿ ಪದ್ಧತಿ ಮುಂತಾದವುಗಳಿಂದ ಕೃಷಿ ಉತ್ಪಾದನೆ ಕಡಿಮೆ ಆಗಿರುವದರಿಂದ ಬಡತನ ರೈತರ ಬೆನ್ನು ಹತ್ತಿದ ಬೇತಾಳವಾಗಿದೆ. ಆದ್ದರಿಂದ ರೈತ ಒಂದು ಸುಗ್ಗಿಯಿಂದ ಇನ್ನೊಂದು ಸುಗ್ಗಿಯವಾರೆಗೆ ಸಾಲ ತರದೇ ಇರಲಾರ. ಅಲ್ಲದೆ ರೈತನ ಉಳಿತಾಯ ಅವನ ಭೂಮಿಯಲ್ಲಿ ವಿನಿಯೋಗ-ವಾಗಿರುವುದರಿಂದ ಹಾಗೂ ಅವನು ಕೂಡಿಟ್ಟ ದವಸ ಧಾನ್ಯಗಳ ಮೂಲಕ ಇರುವುದರಿಂದ ರೈತನಿಗೆ ಸಾಲ ಕೊಡುವುದೇನೂ ಆಕ್ಷೇಪಣೆಯಲ್ಲ ಮತ್ತು ಅವನು ಸಾಲ ತರುವುದು ಅವನ ಬಡತನದ ದ್ಯೋತಕವೂ ಆಗಲಾರದು. ಯಾವುದೇ ದೇಶದ ಗ್ರಾಮೀಣ ಅರ್ಥಶಾಸ್ತ್ರದ ಇತಿಹಾಸದ ಪುಟಗಳನ್ನು ಮಗುಚಿದಾಗ ರೈತ ಸಾಲ ತರಲೇಬೇಕು ಮತ್ತು ತಂದೇ ತರುವನು ಎಂಬ ಅಧ್ಯಾಯ ಬೇರೆ ಆಗಿರಲಾರದು ಎಂದು ಎಫ್. ಎ. ನಿಕೊಲ್ಸನ್‌ರವರು ತಮ್ಮ ವರದಿಯಲ್ಲಿ ಹೇಳಿರುವುದು ಹೆಚ್ಚು ಸಮಂಜಸ.

ಆದರೆ ಕೃಷಿ ಹುಟ್ಟುವಳಿಯ ಅನಿಶ್ಚಿತತೆಯಿಂದ ಇಂದು ಕೊಟ್ಟ ಸಾಲ ಸಕಾಲದಲ್ಲಿ ಮರುಪಾವತಿ ಆಗದಿದ್ದರೆ, ಸಾಲ ಕೊಟ್ಟ ಸಂಸ್ಥೆಗಳು ಕೈ ಸುಟ್ಟುಕೊಳ್ಳುವುದು ಸಹಜ. ಆದರೆ ಕಾನೂನಿನ ಮೂಲಕ ರಚನೆಯಾದ ಸಂಘ-ಬ್ಯಾಂಕುಗಳಿಂದ ರೈತರಿಗೆ ಸಾಲ ಸಿಗದಿದ್ದರೆ, ಅವರು ಶ್ರೀಮಂತರ ಕಪಿಮುಷ್ಟಿಯಲ್ಲಿ ಸಿಕ್ಕು, ಸಾಲ ಅವರಿಗೆ ಶೂಲವಾಗಿ ಸಾಲದಲ್ಲಿ ಹುಟ್ಟಿ ಸಾಲವನ್ನೇ ಕೊನೆಗೆ ಮಕ್ಕಳಿಗೆ ಬಳುವಳಿಯಾಗಿ ಬಿಟ್ಟು ಹೋಗಬೇಕಾಗುತ್ತದೆ. ಅಲ್ಲದೆ ಅವರಿಗೆ ಸಾಲ ಸಿಗದೇ ಇದ್ದರೆ ಅವರ ಕೃಷಿ ಚಟುವಟಿಕೆಗಳು ನಿಂತು ಕೃಷಿ ಉತ್ಪಾದನೆ ಇಲ್ಲದೆ ಅವನ ಆರ್ಥಿಕ ಸ್ಥಿತಿ ಮತ್ತಷ್ಟು ಹದಗೆಡುವುದು ಸಹಜ. ಆದ್ದರಿಂದ ರೈತರಿಗೆ ಸಾಕಷ್ಟು ಸಾಲ ದೊರೆಯದಿದ್ದರೂ ಒಂದು ಸಮಸ್ಯೆ. ದೊರೆತರೂ ಒಂದು ಸಮಸ್ಯೆ. ಇವೆರಡರ ಮಧ್ಯೆ ಸಾಲದ ಸಂಸ್ಥೆಗಳು ಜಾಗರೂಕವಾಗಿ ವ್ಯವಹರಿಸಬೇಕು.

ಭಾರತದಲ್ಲಿ ಕೃಷಿ ಸಾಲದ ಸಮಸ್ಯೆ ಇಂದು ನಿನ್ನೆಯದಲ್ಲ. ಕಳೆದ ಶತಮಾನದ ಕೊಡುಗೆಯಾಗಿ ಇದು ಮುಂದುವರಿದಿದೆ. ರೈತರನ್ನು ಅವರ ಸಾಲದ ಶೂಲದಿಂದ ರಕ್ಷಿಸಿ ಬದುಕಿಸಲು ೧೮೮೩ ರಲ್ಲಿ ಭೂಸುಧಾರಣಾ ಕಾನೂನು ಹಾಗೂ ೧೮೮೪ ರಲ್ಲಿ ರೈತರ ಸಾಲದ ಕಾನೂನು ಅಂದಿನ ಬ್ರಿಟಿಷ್ ಸರಕಾರ ಜಾರಿಗೆ ತಂದು ರೈತರಿಗೆ ಸಾಲ ಹಂಚಲು ಪ್ರಾರಂಭಿಸಿತು. ಇವುಗಳಿಂದ ರೈತರಿಗೆ ದೊರೆಯುತ್ತಿದ್ದ ಸಾಲ ಅವರ ಬೇಡಿಕೆಯ ಕೊನೆಯ ಚುಂಗು ಆಗಿರದಿದ್ದರೂ ಇದು ರೈತರಿಗೆ ಸಾಂಸ್ಥಿಕ

ಸಾಲ ಹಂಚಲು ನಾಂದಿ ಅಥವಾ ಮೊದಲ ಹೆಜ್ಜೆಯೆಂದು ಹೇಳಬಹುದು.

ರೈತರಿಗೆ ಸ್ವಸಹಾಯ, ಪರಸ್ಪರ ಸಹಾಯ ಹಾಗೂ ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ ಮುಂತಾದ ಸಹಕಾರದ ತತ್ವಗಳ ಪ್ರಕಾರ ಕಡಿಮೆ ಬಡ್ಡಿದರದಲ್ಲಿ ಸುಲಭ ಆಧಾರದ ಮೇಲೆ ಸಾಲ ಹಂಚಲು ಅಂದಿನ ಸರಕಾರ ೧೯೦೪ ರಲ್ಲಿ ಸಹಕಾರಿ ಕಾನೂನನ್ನು ಜಾರಿ ಮಾಡಿ ಗ್ರಾಮೀಣ ಸಾಲದ ಸಹಕಾರಿ ಸಂಘಗಳನ್ನು ಸ್ಥಾಪಿಸಿ ಸಾಂಸ್ಥಿಕ ಸಾಲಕ್ಕೆ ಭದ್ರ ಅಡಿಪಾಯ ಹಾಕಿತು.

ಸ್ವಾತಂತ್ರ್ಯ ಪೂರ್ವದಲ್ಲಿ ಈ ಸಂಸ್ಥೆಗಳಿಂದ ರೈತರಿಗೆ ನಿರೀಕ್ಷಿಸಿದಷ್ಟು ನೆರವು ದೊರೆಯದಿದ್ದರೂ, ಸ್ವಾತಂತ್ರ್ಯಾನಂತರ ಇವುಗಳಲ್ಲಿ ಅಭೂತಪೂರ್ವವಾದ ಪ್ರಗತಿ ಆಯಿತು. ಪಂಚವಾರ್ಷಿಕ ಯೋಜನೆಗಳಲ್ಲಿ ಸರಕಾರ ಬೇಸಾಯ ಅಭಿವೃದ್ಧಿಗಾಗಿ ಹೆಚ್ಚು ಪ್ರಾಶಸ್ತ್ಯ ಕೊಟ್ಟು ಹೇರಳ ಬಂಡವಾಳವನ್ನು ವಿನಿಯೋಗಿಸಿತು. ಹಸಿರು ಹಾಗೂ ಶ್ವೇತಕ್ರಾಂತಿಯ ಪರಿಣಾಮದಿಂದ ರೈತರ ಸಾಲದ ಬೇಡಿಕೆ ಮಿತಿ ಮೀರಿ ಕೇವಲ ಸಹಕಾರಿ ಸಂಘಗಳಿಂದ ಮಾತ್ರ ಒದಗಿಸಲು ಅಸಾಧ್ಯವಾಯಿತು. ಇದರಿಂದ ಸಹಕಾರಿ ಸಂಘಗಳಿಗೆ ಪೂರಕವಾಗಿ ವಾಣಿಜ್ಯ ಬ್ಯಾಂಕುಗಳನ್ನು ಕೃಷಿ ಸಾಲ ಹಂಚಲು ತೊಡಗಿಸಲಾಯಿತು.

ಸಹಕಾರಿ ಸಂಘಗಳು ಮತ್ತು ವಾಣಿಜ್ಯ ಬ್ಯಾಂಕುಗಳು ಸಣ್ಣ, ಅತಿ ಸಣ್ಣ ರೈತರ ಹಾಗೂ ಕೃಷಿ ಕೂಲಿಕಾರರ ಹಿತರಕ್ಷಣೆ ಮರೆತು ಕೇವಲ ದೊಡ್ಡ ದೊಡ್ಡ ರೈತರಿಗೆ ಹೆಚ್ಚಿನ ಪ್ರಮಾಣದಲ್ಲಿ ಸಾಲ ಹಂಚುವುದು ಕಂಡು ಬಂದಿದ್ದರಿಂದ ಈ ದುರ್ಬಲ ವರ್ಗದವರಿಗಾಗಿಯೇ ಒಂದು ಪ್ರತ್ಯೇಕವಾದ ಸಾಲದ ಸಂಸ್ಥೆಯನ್ನು ಸ್ಥಾಪಿಸುವುದು ಅವಶ್ಯಕವಾದ್ದರಿಂದ ೧೯೭೫ ರಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು.

ಹೀಗೆ ರಾಷ್ಟ್ರದಲ್ಲಿಂದು ಬೇಸಾಯ ಸಾಲ ಒದಗಿಸಲು ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳು ಹಾಗೂ ಗ್ರಾಮೀಣ ಬ್ಯಾಂಕುಗಳು ತೊಡಗಿವೆ. ದೇಶದಲ್ಲಿಂದು ಒಟ್ಟು ೯೪ ಸಾವಿರ ಪ್ರಾಥಮಿಕ ಸಹಕಾರಿ ಸಂಘಗಳು, ೩೪೫ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳು, ೨೬ ರಾಜ್ಯ ಸಹಕಾರಿ ಬ್ಯಾಂಕುಗಳು ಇದ್ದು ಇವು ರೈತರಿಗೆ ಅಲ್ಪಾವಧಿ ಹಾಗೂ ಮಧ್ಯಮಾವಧಿ ಸಾಲಗಳನ್ನು ಒದಗಿಸುತ್ತವೆ. ಅದರಂತೆ ೧೯ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ಹಾಗೂ ೧೪೪೦ ಪ್ರಾಥಮಿಕ ಹಾಗೂ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು, ಜಿಲ್ಲಾ ಮಟ್ಟದ ಶಾಖೆಗಳು ದೀರ್ಘಾವಧಿ ಸಾಲ ಹಂಚಲು ನಿರತವಾಗಿವೆ. ಅದರಂತೆ ೧೯೮೭ರಲ್ಲಿ ವಾಣಿಜ್ಯ ಬ್ಯಾಂಕುಗಳ ಒಟ್ಟು ೨೪೯೪೩ ಶಾಖೆಗಳು ಹಳ್ಳಿಗಳಲ್ಲಿ ಹಾಗೂ ಚಿಕ್ಕ ಪುಟ್ಟ ನಗರಗಳಲ್ಲಿ ಒಟ್ಟು ೯೪೮೩ ಕೋಟಿ ರೂ. ಸಾಲ ಹಂಚಿದ್ದವು. ಅದರಂತೆ ೩೦-೧-೨-೧೯೮೭ ರಲ್ಲಿ ಒಟ್ಟು ೧೩೩೪೧ ಶಾಖೆಗಳನ್ನು ಹೊಂದಿದ ಗ್ರಾಮೀಣ ಬ್ಯಾಂಕುಗಳು ಒಟ್ಟು ೧೦೬೨ ಕೋಟಿ ರೂ. ಸಾಲ ಹಂಚಿದ್ದವು. ಅದರಂತೆ ಸಹಕಾರಿ ಸಂಸ್ಥೆಗಳು ಜೂನ್ ೩೦, ೧೯೮೭ ರಲ್ಲಿ ಒಟ್ಟು ೭೪೭೮ ಕೋಟಿ ರೂ. ಸಾಲ ಹಂಚಿದ್ದವು.

ಹೀಗೆ ಮೂರು ರೀತಿಯ ಸಂಸ್ಥೆಗಳು ಕೃಷಿಗಾಗಿ ಎಷ್ಟೇ ಸಾಲ ಹಂಚಿದ್ದರೂ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಯಲ್ಲಿ ನಿರೀಕ್ಷಿಸಿದಷ್ಟು ಪ್ರಗತಿ ಸಾಧ್ಯವಾಗದ್ದರಿಂದ ಇದಕ್ಕೆ ಕಾರಣಗಳನ್ನು ಕಂಡು ಹಿಡಿದು ಅವುಗಳಿಗೆ ಪರಿಹಾರಗಳನ್ನು ಸೂಚಿಸಲು ಗ್ರಾಮೀಣ ಸಾಲದ ಸಮೀಕ್ಷೆಯನ್ನು ಕೈಗೊಳ್ಳುವುದೂ ಅತ್ಯವಶ್ಯ.

ಗ್ರಾಮೀಣ ಸಾಲ ಹಂಚುವ ಸಂಸ್ಥೆಗಳ ಬಗ್ಗೆ ಸಮೀಕ್ಷೆಯನ್ನು ಈವರೆಗೆ ಹಲವಾರು ಬಾರಿ ಕೈಗೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಅಂದಿನ ಬ್ರಿಟಿಷ್ ಸರಕಾರ ಈ ಬಗ್ಗೆ ನೇಮಿಸಿದ ಸಮಿತಿಗಳಲ್ಲಿ ಮ್ಯಾಕ್ಲಾಗಾನ್ ಅವರ ಅಧ್ಯಕ್ಷತೆಯಲ್ಲಿ ನೇಮಿಸಿದ ಸಮಿತಿ ವರದಿ ಅತಿ ಪ್ರಮುಖವಾಗಿದೆ. ಮ್ಯಾಕ್ಲಾಗಾನ್ ಸಮಿತಿಯು ಮಾಡಿದ ಶಿಫಾರಸುಗಳನ್ನೆಲ್ಲಾ ಅಂದಿನ ಸರಕಾರ ಅನುಷ್ಠಾನಕ್ಕೆ ತಂದಿದ್ದರೆ ಭಾರತದ ಗ್ರಾಮೀಣ ಚಿತ್ರವಿಂದು ಅತಿ ಹರ್ಷಮಯವಾಗಿರುತ್ತಿತ್ತು. ರಾಯಲ್ ಕಮೀಷನ್ ಭಾರತದಲ್ಲಿ ಸಹಕಾರಿ ಆಂದೋಲನ ಅಯಶಸ್ವಿಯಾದರೆ ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಇದ್ದ ಆಶೆಗಳು ನಿರಾಶೆ ಆದಂತೆ ಎಂದು ಹೇಳಿ ಸಹಕಾರಿ ಆಂದೋಲನದ ಅನೇಕ ಲೋಪದೋಷಗಳನ್ನು ಎತ್ತಿ ತೋರಿಸಿ ಅದರ ಪ್ರಗತಿಗಾಗಿ ಅನೇಕ ಶಿಫಾರಸುಗಳನ್ನು ಮಾಡಿತು.

ಸ್ವಾತಂತ್ರ್ಯಾನಂತರ ಗ್ರಾಮೀಣ ಸಾಲದ ಪರಿಶೀಲನೆ ಮಾಡಲು ಈವರೆಗೆ ಭಾರತದ ರಿಸರ್ವ್ ಬ್ಯಾಂಕು ಮೂರು ಸಮಿತಿಗಳನ್ನು ನೇಮಿಸಿದೆ. ಅವು-

೧ ಅಖಿಲ ಭಾರತ ಗ್ರಾಮೀಣ ಪತ್ತು ಪರಿಶೀಲನಾ ಸಮಿತಿ-೧೯೫೪

೨ ಅಖಿಲ ಭಾರತ ಗ್ರಾಮೀಣ ಪತ್ತು ಪುನರ್ ವಿಮರ್ಶನ ಸಮಿತಿ-೧೯೬೯ ಮತ್ತು

೩ ಕ್ರಾಫಿಕಾರ್ಡ್-೧೯೭೮.

೧೯೫೪ರಲ್ಲಿ ಶ್ರೀ ಎ. ಡಿ. ಗೋರವಾಲಾರವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಅಖಿಲ ಭಾರತ ಗ್ರಾಮೀಣ ಪತ್ತು ಪರಿಶೀಲನಾ ಸಮಿತಿ ಸಲ್ಲಿಸಿದ ವರದಿ ಭಾರತದ ಸಹಕಾರ ಆಂದೋಲನದ ಒಂದು ಮೈಲಿಗಲ್ಲು. ಇಂದು ಭಾರತದಲ್ಲಿ ಸಹಕಾರ ಅಯಶಸ್ವಿಯಾಗಿದೆ. ಆದರೆ ಅದು ಯಶಸ್ವಿಯಾಗಬೇಕೆಂದು ಪ್ರತಿಪಾದಿಸುತ್ತಾ ಸಹಕಾರಿ ಆಂದೋಳನದ ಪ್ರಗತಿಗಾಗಿ ಅನೇಕ ಶಿಫಾರಸುಗಳನ್ನು ಅನುಷ್ಠಾನಕ್ಕೆ ತಂದನಂತರ ಸಹಕಾರಿ ಆಂದೋಳನ ಸುಭದ್ರವಾಗಿ ವಿಶಾಲವಾಗಿ ಬೆಳೆದು ಬಂದಿತು. ಈ ಸಮಿತಿಯ ಮುಖ್ಯ ಶಿಫಾರಸುಗಳೆಂದರೆ, ಭಾರತದ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾವನ್ನು ರಾಷ್ಟ್ರೀಕರಣಗೊಳಿಸಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಆಗಿ ಪರಿವರ್ತಿಸುವುದು, ಸಹಕಾರಿ ಸಂಘಗಳಲ್ಲಿ ಸರಕಾರದ ಸಾಲಗಾರಿಕೆ, ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಸಂಸ್ಥೆ ನಿಗಮದ ಸ್ಥಾಪನೆ ಮುಂತಾದವುಗಳು ಪ್ರಮುಖವಾಗಿವೆ.

೧೯೬೯ರಲ್ಲಿ ವರದಿ ಸಲ್ಲಿಸಿದ ಶ್ರೀ ಬಿ. ವೆಂಕಟಪ್ಪಯ್ಯನವರ ಅಧ್ಯಕ್ಷತೆಯಲ್ಲಿ ನೇಮಿಸಿದ ಅಖಿಲ ಭಾರತದ ಗ್ರಾಮೀಣ ಪತ್ತು ಮರು ಪರಿಶೀಲನಾ ಸಮಿತಿಯು ದುರ್ಬಲ ವರ್ಗಗಳ ಅಭಿವೃದ್ಧಿಗಾಗಿ ಎಸ್‌ಎಫ್‌ಡಿಎ (SFDA-ಸ್ಮಾಲ್ ಫಾರ್ಮರ್ಸ್ ಡೆವೆಲಪ್ಮೆಂಟ್ ಏಜೆನ್ಸಿ) ಸಣ್ಣ ರೈತರ ಅಭಿವೃದ್ಧಿ ಅಭಿಕರಣಗಳು, ಎಂಎಫ್‌ಎಎಲ್ ಅತಿ ಸಣ್ಣ ರೈತರು ಮತ್ತು ಕೃಷಿ ಕಾರ್ಮಿಕ ಅಭಿವೃದ್ಧಿ ಅಭಿಕರಣಗಳು, (ಮಾರ್ಜಿನಲ್ ಫಾರ್ಮರ್ಸ್ ಅಂಡ್ ಅಗ್ರಿಕಲ್ಚರಲ್ ಲೇಬರ್ ಡೆವೆಲಪ್ಮೆಂಟ್ ಏಜೆನ್ಸೀಸ್) ಗ್ರಾಮೀಣ ವಿದ್ಯುದ್ದೀಕರಣದ ನಿಗಮಗಳ ರಚನೆಗೆ ಶಿಫಾರಸು ಮಾಡಿತು. ಅಲ್ಲದೆ ೪ನೇ ಪಂಚವಾರ್ಷಿಕ ಯೋಜನೆಯ ಕೊನೆಗೆ ಅಂದರೆ ೧೯೭೪-೭೫ ರಲ್ಲಿ ಕೃಷಿ ಸಾಲದ ಬೇಡಿಕೆ ಒಟ್ಟು ೪೦೦೦ ಕೋಟಿ ರೂ. ಮುಟ್ಟಬಹುದೆಂದೂ, ಇದರಲ್ಲಿ ಸಹಕಾರ ಸಂಘಗಳು ಕೇವಲ ೧೩ ರಷ್ಟು ಹಂಚಬಹುದೆಂದೂ ಅಂದಾಜು ಮಾಡಿ ವಾಣಿಜ್ಯ ಬ್ಯಾಂಕುಗಳು ಕೃಷಿ ಸಾಲ ಹಂಚಲು ತೊಡಗಬೇಕೆಂದು ಶಿಫಾರಸು ಮಾಡಿತು. ಇದರ ಪ್ರಯುಕ್ತವಾಗಿ ರಾಷ್ಟ್ರದ ೧೪ ಬೃಹತ್ ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣಗೊಂಡವು.

೧೯೭೮ ರಲ್ಲಿ ಭಾರತದ ರಿಸರ್ವ್ ಬ್ಯಾಂಕು ಶ್ರೀ ನರಸಿಂಹನ್ ರವರ ನೇತೃತ್ವದಲ್ಲಿ ಕೃಷಿ ಹಾಗೂ ಗ್ರಾಮೀಣ ಸಾಂಸ್ಥಿಕ ಸಾಲದ ವ್ಯವಸ್ಥೆಯ ಪುನರೀಕ್ಷಣ ಸಮಿತಿಯನ್ನು ಗ್ರಾಮೀಣ ಸಾಲ ಹಂಚುವ ಸಂಸ್ಥೆಗಳಿಗೆ ಪುನರ್ಧನ ಸಾಲ ಹಂಚಲು ಹಾಗೂ ಅವುಗಳಿಗೆ ಮಾರ್ಗದರ್ಶನ, ಮೇಲ್ವಿಚಾರಣೆ ಒದಗಿಸಿ ಅವುಗಳ ಮೇಲೆ ಹತೋಟಿ ಹೊಂದಲು ರಾಷ್ಟ್ರಮಟ್ಟದಲ್ಲಿ ಪ್ರತ್ಯೇಕ ರಾಷ್ಟ್ರೀಯ ಬ್ಯಾಂಕು ಒಂದು ಇರಬೇಕೆಂದು ಶಿಫಾರಸು ಮಾಡಿತು. ಇದರ ಶಿಫಾರಸಿನ ಮೇರೆಗೆ ೧೯೮೨ ರಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ಸ್ಥಾಪನೆಗೊಂಡಿತು.

**ಕೃಷಿ ಪತ್ತಿನ ಪುನರೀಕ್ಷಣ ಸಮಿತಿ ಖುಸ್ರೋ ಸಮಿತಿ ೧೯೮೮**

ಭಾರತದ ರಿಸರ್ವ್ ಬ್ಯಾಂಕು, ಕೇಂದ್ರ ಸರಕಾರ ಹಾಗೂ ವಿಶ್ವ ಬ್ಯಾಂಕಿನೊಡನೆ ಸಮಾಲೋಚಿಸಿ ೧೯೮೬ರ ಆಗಸ್ಟ್ ೬ ರಂದು ಈ ಸಮಿತಿಯನ್ನು ಭಾರತದ ಯೋಜನಾ ಆಯೋಗದ ಮಾಜಿ ಸದಸ್ಯ ಪ್ರೊ. ಎ. ಎಂ. ಖುಸ್ರೋರವರ ಅಧ್ಯಕ್ಷತೆಯಲ್ಲಿ ನೇಮಿಸಲಾಯಿತು. ಒಟ್ಟು ೨೪ ಅಧ್ಯಾಯಗಳಲ್ಲಿ ಹತ್ತು ಭಾಗಗಳಲ್ಲಿ ವಿವರಿಸಿದ ಈ ಬೃಹತ್ ವರದಿ ಒಟ್ಟು ೧೦೭೪ ಪುಟಗಳನ್ನು ಒಳಗೊಂಡಿರುತ್ತದೆ.

**ಸಮಿತಿಯ ಸದಸ್ಯರು**

ಈ ಸಮಿತಿಯಲ್ಲಿ ಒಟ್ಟು ಏಳು ಜನ ಸದಸ್ಯರಿದ್ದರು. ನಾಲ್ಕುಜನ ಪರಿಣತರು ಭಾರತೀಯರಾಗಿದ್ದು ಉಳಿದ ಮೂರು ಜನ ಪರಿಣತರು ವಿದೇಶೀಯರಾಗಿದ್ದರು.

ಈ ಸಮಿತಿಗೆ ಶ್ರೀ ಸಿ. ವಿ. ನಾಯರ್ ರವರು ಕಾರ್ಯ ನಿರ್ದೇಶಕರಾಗಿದ್ದರು.

**ಉದ್ದೇಶಗಳು**

ಈ ಸಮಿತಿಯು ಕೆಳಗಿನ ವಿಷಯಗಳ ಬಗ್ಗೆ ಅಧ್ಯಯನ ಮಾಡಿತು.

* ಸಾಮಾನ್ಯವಾಗಿ ಕೃಷಿ ಪತ್ತಿನ ಬಗ್ಗೆ.
* ಕೃಷಿ ಸಾಲ ಹಂಚುವ ಸಂಸ್ಥೆಗಳ ಬಗ್ಗೆ ಹಾಗೂ ಅವುಗಳ ಪ್ರಯೋಜನಗಳ ಬಗ್ಗೆ.
* ಬೇಸಾಯ ಸಾಲ ವಿತರಣೆಯಲ್ಲಿ ಸಾಲದ ಶ್ರೇಣಿ ಸಂಸ್ಥೆಗಳ ಬಗ್ಗೆ.
* ಸಾಲ ಹಂಚಲು ತಗಲುವ ವೆಚ್ಚ ಹಾಗೂ ಲಾಭಾಂಶದ ಬಗ್ಗೆ.
* ನಬಾರ್ಡ್ ಸಂಘಟನೆ ಹಾಗೂ ಆಡಳಿತದ ಬಗ್ಗೆ.

**ಶಿಫಾರಸುಗಳು**

ಈ ಸಮಿತಿಯು ವಾಣಿಜ್ಯ ಬ್ಯಾಂಕುಗಳ, ಗ್ರಾಮೀಣ ಬ್ಯಾಂಕುಗಳ ಬಗ್ಗೆ ಅನೇಕ ಶಿಫಾರಸುಗಳನ್ನು ಮಾಡಿದೆ. ಅವುಗಳ ಲೋಪದೋಷ ಹಾಗೂ ಸಮಸ್ಯೆಗಳನ್ನು ಎತ್ತಿ ತೋರಿಸಿ ಅವುಗಳ ಪರಿಹಾರಕ್ಕಾಗಿ ಸುಮಾರು ಒಟ್ಟು ೧೮೨ ಶಿಫಾರಸುಗಳನ್ನು ಮಾಡಿದೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಮಾತ್ರ ಕೆಳಗೆ ಕೊಡಲಾಗಿದೆ.

* ರಾಷ್ಟ್ರೀಯ ಸಹಕಾರಿ ಬ್ಯಾಂಕಿನ ಸ್ಥಾಪನೆ
* ಬೆಳೆ ವಿಮಾ ಯೋಜನೆಯ ನಿಗಮದ ಸ್ಥಾಪನೆ
* ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ನಿಗಮಗಳ ರಚನೆ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಅವುಗಳ ಮಾತೃ ಬ್ಯಾಂಕುಗಳಲ್ಲಿ ವಿಲೀನೀಕರಣಗೊಳಿಸುವುದು.

ಸುಸ್ತಿ ಸಾಲದ ವಸೂಲಾತಿಗಾಗಿ ಎಲ್ಲಾ ಸಂಸ್ಥೆಗಳಿಗೆ ಅನ್ವಯ ಆಗುವಂತೆ ಪ್ರತಿ ರಾಜ್ಯದಲ್ಲಿ ಒಂದು ಏಕರೂಪ ಸುಸ್ತಿ ಸಾಲ ವಸೂಲಿಯ ಬಗ್ಗೆ ಕಾನೂನಿನ ಮತ್ತು ನ್ಯಾಯಮಂಡಲಿಗಳ ರಚನೆ ಹಾಗೂ ಸಾಲ ವಸೂಲಾತಿಗಾಗಿ ಪ್ರತ್ಯೇಕ ಸರಕಾರದ ಇಲಾಖೆಯ ರಚನೆ.

ಕೃಷಿ ಸಾಲದ ಮೇಲಿನ ಬಡ್ಡಿ ದರವನ್ನು ಶೇ. ೧೫.೫ನ್ನು ಮೀರದ ಹಾಗೆ ಹೆಚ್ಚಿಸುವುದು.

ತರಬೇತಿಗೆ ಹೆಚ್ಚಿನ ಮಹತ್ವ ಕೊಡಬೇಕು

ಗಣಕ ಯಂತ್ರಗಳ ಬಳಕೆ ಜಿಲ್ಲಾ ಮಟ್ಟದಲ್ಲಿರಬೇಕು: ಗ್ರಾಮಮಟ್ಟದಲ್ಲಿ ಇವುಗಳ ಮಹತ್ವ ಅಷ್ಟಿಲ್ಲ.

ವಾಣಿಜ್ಯ ಬ್ಯಾಂಕುಗಳ ಶಾಖಾ ವ್ಯವಸ್ಥಾಪಕರಿಗೆ ಕೆಲವೊಂದು ವಿಶೇಷ ಸವಲತ್ತುಗಳು.

ಅಲ್ಪಾವಧಿ ಹಾಗೂ ದೀರ್ಘಾವಧಿ ಸಾಲ ಒದಗಿಸುವ ಸಹಕಾರ ಸಂಘ ಹಾಗೂ ಬ್ಯಾಂಕುಗಳು ಒಂದುಗೂಡುವಿಕೆಯ ವಿಷಯವನ್ನು ಮುಂದೂಡಬೇಕು.

ಸಹಕಾರಿ ಸಂಘ ಹಾಗೂ ಬ್ಯಾಂಕುಗಳಿಗೆ ಸಂಬಂಧಿಸಿದ ಶಿಫಾರಸುಗಳು.

## ಭಾರತದ ರಾಷ್ಟ್ರೀಯ ಸಹಕಾರಿ ಬ್ಯಾಂಕಿನ ಸ್ಥಾಪನೆ

ರಾಷ್ಟ್ರಮಟ್ಟದಲ್ಲಿ ಸಮಸ್ತ ಸಹಕಾರಿ ಬ್ಯಾಂಕುಗಳ ಮುಂದಾಳಾಗಿ, ಅವುಗಳ ಪ್ರಗತಿ ಹಾಗೂ ಅವುಗಳ ಸಮಸ್ಯೆಗಳ ಪರಿಹಾರದ ಬಗ್ಗೆ ರಾಷ್ಟ್ರಮಟ್ಟದ ಬ್ಯಾಂಕಿಂಗ್ ವೇದಿಕೆಗಳ ಮೇಲೆ ಪ್ರತಿಪಾದಿಸಲು ಹಾಗೂ ಇಡೀ ರಾಷ್ಟ್ರದ ಸಹಕಾರಿ ಬ್ಯಾಂಕಿಂಗ್ ವ್ಯವಸ್ಥೆಗೆ ಒಂದು ಮುಖವಾಣಿಯಾಗಿ ವ್ಯವಹರಿಸಲು ಸಹಕಾರಿ ಬ್ಯಾಂಕುಗಳದೇ ಆದ ಒಂದು ರಾಷ್ಟ್ರೀಯ ಸಹಕಾರಿ ಬ್ಯಾಂಕಿನ ಸ್ಥಾಪನೆಯ ಅವಶ್ಯಕತೆ ಮೊದಲಿನಿಂದಲೂ ಇತ್ತು. ಈ ಬ್ಯಾಂಕಿನ ಸ್ಥಾಪನೆಯ ಅವಶ್ಯಕತೆಯ ಬಗ್ಗೆ ರಾಷ್ಟ್ರಮಟ್ಟದ ಅನೇಕ ವೇದಿಕೆಗಳ ಮೇಲೆ ಬೇಡಿಕೆಯನ್ನು ಸಲ್ಲಿಸಲಾಗುತ್ತಿತ್ತು. ಸಹಕಾರಿ ಬ್ಯಾಂಕುಗಳಿಗೆ ರಾಷ್ಟ್ರೀಯ ಮಟ್ಟದ ತಮ್ಮದೇ ಆದ ರಾಷ್ಟ್ರೀಯ ಸಹಕಾರಿ ಬ್ಯಾಂಕು ಇರದೇ ಇದ್ದುದರಿಂದ ಎರಡು ರೀತಿಯ ಹಾನಿ ಸಹಕಾರಿ ಆಂದೋಲನಕ್ಕೆ ಆಗುತ್ತಿತ್ತು. ಮೊದಲನೆಯದಾಗಿ ರಾಜ್ಯ ಸಹಕಾರಿ ಬ್ಯಾಂಕುಗಳ ಹಾಗೂ ರಾಷ್ಟ್ರಮಟ್ಟದ ಸಹಕಾರಿ ಮಹಾಮಂಡಳಗಳ ಹೆಚ್ಚುವರಿ ಹಣ ವಾಣಿಜ್ಯ ಬ್ಯಾಂಕುಗಳಿಗೆ ಠೇವಣಿ ಮೂಲಕ ಹರಿದು ಹೋಗುತ್ತಿತ್ತು. ಎರಡನೆಯದಾಗಿ, ಸಹಕಾರಿ ಬ್ಯಾಂಕುಗಳ ಹಾಗೂ ರಾಷ್ಟ್ರೀಯ ಮಟ್ಟದ ಸಹಕಾರಿ ಮಹಾಮಂಡಳಗಳ ಉತ್ತಮ ಹಾಗೂ ಲಾಭದಾಯಕವಾದ ಬ್ಯಾಂಕಿಂಗ್ ವ್ಯವಹಾರ ವಾಣಿಜ್ಯ ಬ್ಯಾಂಕುಗಳ ಪಾಲಾಗುತ್ತಿತ್ತು. ಆದ್ದರಿಂದ ಈ ಸಮಿತಿ ಈ ಬ್ಯಾಂಕಿನ ಸ್ಥಾಪನೆಗೆ ಶಿಫಾರಸು ಮಾಡಿರುವುದು ಶ್ಲಾಘನೀಯ ಹಾಗೂ ಸ್ವಾಗತಾರ್ಹ.

ಭಾರತದ ರಾಷ್ಟ್ರೀಯ ಸಹಕಾರಿ ಬ್ಯಾಂಕು ನಬಾರ್ಡಿಗೆ ಪರ್ಯಾಯ ಬ್ಯಾಂಕಾಗದು. ಇಂದಿನಂತೆ ಮುಂದೂ ನಬಾರ್ಡ್ ಸಹಕಾರಿ ಬ್ಯಾಂಕುಗಳಿಗೆ ಒದಗಿಸುವ ಪುನರ್ ಧನ ಸಾಲದ ವ್ಯವಸ್ಥೆ ಮುಂದುವರಿಯುತ್ತವೆ. ಈ ಸಂಸ್ಥೆ ಸಹಕಾರಿ ಸಾಲದ ವಿತರಣಾ ವ್ಯವಸ್ಥೆಯ ಸಮತೋಲನ ಕಾಯುವುದು.

ರಾಷ್ಟ್ರಮಟ್ಟದ ಈ ಸಂಸ್ಥೆಯ ಮಾಲೀಕತ್ವ ಹಾಗೂ ಆಡಳಿತವನ್ನು ರಾಷ್ಟ್ರದ ಸಮಸ್ತ ಸಹಕಾರಿ ಪತ್ತಿನ ವ್ಯವಸ್ಥೆ ಹೊಂದಿರುತ್ತದೆ. ಗ್ರಾಮಾಂತರ ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳಿಂದ ರಾಜ್ಯ ಸಹಕಾರಿ ಬ್ಯಾಂಕುಗಳವರೆಗಿನ ಅಭಿವೃದ್ಧಿಯ ಜವಾಬ್ದಾರಿಯನ್ನು ಈ ಸಂಸ್ಥೆ ವಹಿಸಿಕೊಳ್ಳುತ್ತವೆ. ರಾಷ್ಟ್ರಮಟ್ಟದಲ್ಲಿ ಸಹಕಾರಿ ಪತ್ತಿನ ವ್ಯವಸ್ಥೆಯ ಬಗ್ಗೆ ಅಂಕಿ ಅಂಶಗಳನ್ನು ಹೊಂದುವುದು ಹಾಗೂ ಭಾರತದ ಸಹಕಾರಿ ಆಂದೋಲನದ ಪ್ರಗತಿಯ ಸಿಂಹಾವಲೋಕನಗೈಯುವುದು ಈ ಬ್ಯಾಂಕಿನ ಕರ್ತವ್ಯ. ಪಟ್ಟಣ ಸಹಕಾರಿ ಬ್ಯಾಂಕುಗಳು ಹಾಗೂ ಇತರ ಸಹಕಾರಿ ಬ್ಯಾಂಕುಗಳು ಈ ರಾಷ್ಟ್ರೀಯ ಸಹಕಾರಿ ಬ್ಯಾಂಕಿನಲ್ಲಿಟ್ಟ ಠೇವಣಿಯನ್ನು ಆಯಾ ಬ್ಯಾಂಕುಗಳ ದ್ರವಿಕ ಆಸ್ತಿಗಳಾಗಿ ಪರಿಗಣಿಸಲು ಬ್ಯಾಂಕಿಂಗ್ ನಿಯಂತ್ರಣ ಕಾನೂನು ೧೯೪೯ ಸಹಕಾರಿ ಸಂಘಗಳಿಗೆ ಅನ್ವಯವಾಗುವಂತೆ ಇದಕ್ಕೆ ಸೂಕ್ತ ತಿದ್ದುಪಡಿ ಸೂಚಿಸಲಾಗುವುದು. ರಾಜ್ಯ ಸಹಕಾರಿ ಬ್ಯಾಂಕುಗಳು ತಮ್ಮ ನಗದು ಆಪದ್ಧನದಲ್ಲಿ ಶೇ. ೫೦ ರಷ್ಟನ್ನು ಈ ಬ್ಯಾಂಕಿನಲ್ಲಿ ಠೇವಣಿಯಾಗಿಡಲು ಅನುಕೂಲ ಕಲ್ಪಿಸಲಾಗುವುದು. ರಾಜ್ಯ ಸಹಕಾರಿ ಬ್ಯಾಂಕುಗಳು ಹಾಗೂ ಇತರ ರಾಷ್ಟ್ರಮಟ್ಟದ ಸಹಕಾರಿ ಸಂಘ ಮಹಾಮಂಡಳಿಗಳು ತಮ್ಮ ಹೆಚ್ಚುವರಿ ಹಣ ಹಾಗೂ ಆಪದ್ಧನದ ನಿಧಿಗಳನ್ನು ಈ ಬ್ಯಾಂಕುಗಳಲ್ಲಿ ಠೇವಣಿಯಾಗಿಡಬೇಕು. ಈ ಬ್ಯಾಂಕು ತನ್ನ ವಾರ್ಷಿಕ ನಿವ್ವಳ ಲಾಭದಿಂದ ಸದಸ್ಯ ಬ್ಯಾಂಕುಗಳಿಂದ ದೇಣಿಗೆ ಹೊಂದಿ ಒಂದು ಅಭಿವೃದ್ಧಿ ನಿಧಿಯನ್ನು ಸ್ಥಾಪಿಸಿ ರಾಜ್ಯ ಸಹಕಾರಿ ಬ್ಯಾಂಕುಗಳ ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳ ಕಾರ್ಯದರ್ಶಿಗಳಿಗೆ ತರಬೇತಿಗಾಗಿ ಹಾಗೂ ಸಂಶೋಧನಾ ಕಾರ್ಯಗಳಿಗೆ ವಿನಿಯೋಗಿಸಬೇಕು. ಈಗಾಗಲೇ ರಾಷ್ಟ್ರೀಯ ಸಹಕಾರಿ ಯೂನಿಯನ್, ರಾಜ್ಯ ಸಹಕಾರಿ ಬ್ಯಾಂಕುಗಳ ರಾಷ್ಟ್ರೀಯ ಮಹಾಮಂಡಳ, ಕೇಂದ್ರ ಸರಕಾರ ಹಾಗೂ ಭಾರತದ ರಿಜರ್ವ್ ಬ್ಯಾಂಕ್ ಕೂಡಿ ಈ ಬ್ಯಾಂಕನ್ನು ಸ್ಥಾಪಿಸಲು ಮುಂದಿನ ಕ್ರಮ ಕೈಗೊಳ್ಳಲು ನಿವೇದಿಸಲಾಗಿದೆ.

## ಬೆಳೆ ವಿಮಾ ಯೋಜನೆಯ ನಿಗಮ

ಪ್ರಕೃತಿಯ ವಿಕೋಪದಿಂದ ಬೆಳೆಬಾರದೆ ಕೊಟ್ಟ ಸಾಲದ ಮರುಪಾವತಿ ಆಗದಿದ್ದಾಗ ಅದನ್ನು ರಾಷ್ಟ್ರೀಯ ಕೃಷಿ ಸಾಲದ ಸ್ಥಿರೀಕರಣ ನಿಧಿಯಿಂದ ಮಧ್ಯಮಾವಧಿ ಸಾಲವನ್ನಾಗಿ ಮಾರ್ಪಡಿಸುವ ಅಥವಾ ಪುನರ್ ಮಾರ್ಪಡಿಸಿ ಹೊಸ ಸಾಲ ಒದಗಿಸುವ ವ್ಯವಸ್ಥೆ ಇದ್ದರೂ, ಇದು ಸಾಲ ತಂದ ರೈತನ ಸಾಲದ ಭಾರವನ್ನು ಹೆಚ್ಚಿಸುವುದೇ ಹೊರತು ಅವನು ಕಳೆದುಕೊಂಡ ಬೆಳೆಯ ಹಾನಿಯನ್ನು ತುಂಬಿಕೊಡುವುದಿಲ್ಲ. ಬೆಳೆಯ ಹಾನಿಯನ್ನು ತುಂಬಿಕೊಡಲು ಒಂದು ಉತ್ತಮ ಮಾಧ್ಯಮವೆಂದರೆ ಬೆಳೆ ವಿಮಾ ಯೋಜನೆ. ಈ ಯೋಜನೆ ಕಳೆದ ೭-೮ ವರ್ಷಗಳಿಂದ ಸಹಕಾರಿ ಸಂಘಗಳಲ್ಲಿ ಜಾರಿಯಲ್ಲಿದ್ದರೂ, ರೈತ ಬೆಳೆದ ಎಲ್ಲಾ ಬೆಳೆಗಳಿಗೆ ಹಾಗೂ ಸಮಗ್ರ ಭಾರತಾದ್ಯಂತ ಜಾರಿಯಲ್ಲಿರುವುದಿಲ್ಲ. ಇದು ಕೇವಲ ಕೆಲವೇ ಬೆಳೆಗಳಿಗೆ ಹಾಗೂ ಕೆಲವೊಂದು ಜಿಲ್ಲೆಗಳ ಕೆಲವೊಂದು ಭಾಗಗಳಲ್ಲಿ ಜಾರಿಯಲ್ಲಿದೆ. ಇದರಿಂದ ರೈತರಿಗೆ ಹೆಚ್ಚಿನ ಪ್ರಯೋಜನ ಆಗುತ್ತಿಲ್ಲ. ಆದ್ದರಿಂದ ಈ ಬೆಳೆ ವಿಮಾ ಯೋಜನೆಯನ್ನು ಸಕಲ ಬೆಳೆಗಳಿಗೂ ಭಾರತಾದ್ಯಂತ ವ್ಯಾಪಕಗೊಳಿಸಲು ಪ್ರತ್ಯೇಕ ಒಂದು ಬೆಳೆ ವಿಮಾ ಯೋಜನೆಯನ್ನು ಸ್ಥಾಪಿಸುವುದು ಅವಶ್ಯ. ಈ ಸಂಸ್ಥೆಯೂ ಕೂಡ ಎಂದೋ ರಚನೆ ಆಗಬೇಕಿತ್ತು. ಈಗಲಾದರೂ ಸ್ಥಾಪನೆ ಆಗುತ್ತಿರುವುದು ಸ್ವಾಗತಾರ್ಹ.

## ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ನಿಗಮ

ಕೃಷಿ ಸಾಲ ಒಟ್ಟಾರೆ ಎಲ್ಲಾ ಸಾಲದ ಸಂಸ್ಥೆಗಳಿಂದ ರಾಷ್ಟ್ರಾದ್ಯಂತ ಸಮನಾಗಿ ಬೆಳೆದು ಬಂದಿಲ್ಲ. ಹೀಗಾಗಿ ರೈತರಿಗೆ ಸಾಕಷ್ಟು ಸಾಲ ಅನೇಕ ರಾಜ್ಯಗಳಲ್ಲಿ ಸಿಗುತ್ತಿಲ್ಲ. ಆದ್ದರಿಂದ ಬಿಹಾರ, ಒರಿಸ್ಸಾ, ಪಶ್ಚಿಮ ಬಂಗಾಳ ಹಾಗೂ ವಾಯುವ್ಯ ರಾಜ್ಯಗಳಿಗೆ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ನಿಗಮದ ಸ್ಥಾಪನೆ ಆಗಬೇಕೆಂದು ಶಿಫಾರಸು ಮಾಡಿದೆ.

### ಗ್ರಾಮೀಣ ಬ್ಯಾಂಕುಗಳನ್ನು ಅವುಗಳ ಮಾತೃ ಬ್ಯಾಂಕುಗಳಲ್ಲಿ ವಿಲೀನಗೊಳಿಸುವುದು

ದೇಶದಲ್ಲಿದ್ದ ಅನೇಕ ಗ್ರಾಮೀಣ ಬ್ಯಾಂಕುಗಲ್ಲಿ ಬಹುತೇಕ ಬ್ಯಾಂಕುಗಳು ಹಾನಿಯಲ್ಲಿ ನಡೆಯುತ್ತಿರುವುದರಿಂದ ಅವುಗಳನ್ನು ಸೃಷ್ಟಿಸಿದ ಬ್ಯಾಂಕುಗಳಲ್ಲಿ ವಿಲೀನಗೊಳಿಸುವುದು ಸೂಕ್ತ. ಈ ಬ್ಯಾಂಕುಗಳ ಲಾಭ-ನಷ್ಟದ ವಿವರಗಳನ್ನು ಕೋಷ್ಟಕ ೧ ರಲ್ಲಿ ನೋಡಬಹುದು.

ಅಲ್ಲದೆ ಇವುಗಳಲ್ಲಿ ಹಿಂದಿನ ವರ್ಷಗಳಿಂದ ಕೂಡಿ ಬಂದ ನಷ್ಟ ಕೆಳಕಂಡಂತಿದೆ:

ಕೋಷ್ಟಕ ೧

ಗ್ರಾಮೀಣ ಬ್ಯಾಂಕುಗಳ ಪ್ರಗತಿ ಚಿತ್ರ

ಲಕ್ಷ ರೂ.ಗಳಲ್ಲಿ.

| ವರ್ಷ | ಒಟ್ಟು ಬ್ಯಾಂಕುಗಳು | ಲಾಭದಲ್ಲಿರುವಂಥವುಗಳು ಬ್ಯಾಂಕುಗಳು | ಮೊತ್ತ |
|---|---|---|---|
| ೧೯೭೬ | ೪೦ | ೨೬ | ೧೦.೯೨ |
| ೧೯೮೦ | ೮೫ | ೫೬ | ೨೧೭.೫೦ |
| ೧೯೮೪ | ೧೭೩ | ೪೩ | ೩೧೮.೩೩ |
| ೧೯೮೫ | ೧೮೮ | ೩೬ | ೩೨೬.೦೦ |
| ೧೯೮೬ | ೧೯೪ | ೪೬ | ೪೩೨.೧೨ |
| ೧೯೮೭ | – | – | – |

ಕೋಷ್ಟಕ -೨

ಗ್ರಾಮೀಣ ಬ್ಯಾಂಕುಗಳ ಕೂಡಿ ಬಂದ ಒಟ್ಟು ನಷ್ಟ

(ಕೋಟಿ ರೂ.ಗಳಲ್ಲಿ)

| ವರ್ಷ | ಕೂಡಿಬಂದ ನಷ್ಟ | ವರ್ಷ |
|---|---|---|
| ೧೯೮೨ | ೯.೮೧ | ೧೯೮೫ |
| ೧೯೮೪ | ೩೧.೭೧ | ೧೯೮೬ |
| | | ೧೯೮೭ |

ನಷ್ಟದಲ್ಲಿರುವ ಈ ಬ್ಯಾಂಕುಗಳನ್ನು ಮುಚ್ಚುವುದು ಅವಶ್ಯಕವಾದರೂ ಹೆಚ್ಚಿನ ಸಂಖ್ಯೆಗಳಲ್ಲಿ ಶಾಖೆಗಳನ್ನು ಹೊಂದಿರುವ ಈ ಬ್ಯಾಂಕುಗಳನ್ನು ಅವುಗಳನ್ನು ಸ್ಥಾಪಿಸಿದ ಬ್ಯಾಂಕುಗಳಲ್ಲಿ ವಿಲೀನಗೊಳಿಸಿ ಅವುಗಳ ಶಾಖೆಗಳನ್ನು ಅವುಗಳ ಮಾತೃ ಸಂಸ್ಥೆಗಳು ಮುಂದುವರಿಸುವುದು ಸೂಕ್ತ.

### ಸುಸ್ತಿ ಸಾಲದ ಸಮಸ್ಯೆ

ಕೃಷಿ ಸಾಲ ಹಂಚುವ ಸಂಸ್ಥೆಗಳ ಅತೀ ದೊಡ್ಡ ಸಮಸ್ಯೆಯೆಂದರೆ ಸುಸ್ತಿ ಸಾಲದ ಸಮಸ್ಯೆ. ಇದೊಂದು ಬೇಗನೆ ಗುಣಪಡಿಸಲಾರದ ರೋಗವಿದ್ದಂತೆ. ಈ ರೋಗ ಕೇವಲ ಸಹಕಾರಿ ಸಂಘಗಳಲ್ಲಿ ಮಾತ್ರ ಮಿತಿಮೀರಿದೆ. ಆದರೆ ವಾಣಿಜ್ಯ ಹಾಗೂ ಗ್ರಾಮೀಣ ಬ್ಯಾಂಕುಗಳಲ್ಲಿಯೂ ಸಹ ಇದು ಮಹಾರೋಗವಾಗಿ ಪರಿಣಮಿಸಿದೆ. ಇದನ್ನು ೩ನೇ ಕೋಷ್ಟಕದಲ್ಲಿ ನೋಡಬಹುದು.

ಕೋಷ್ಟಕ ೩ — ಸುಸ್ತಿ ಸಾಲದ ಪ್ರಮಾಣ (ಕೋಟಿ ರೂ.)

| ಸಂಸ್ಥೆಗಳು | ೧೯೭೫-೭೬ | ೧೯೮೦-೮೧ | ೧೯೮೧-೮೨ | ೧೯೮೨-೮೩ | ೧೯೮೩-೮೪ | ೧೯೮೪-೮೫ | ೧೯೮೫-೮೬ |
|---|---|---|---|---|---|---|---|
| ವಾಣಿಜ್ಯ | ೨೦೦ | ೭೨೭ | ೮೯೩ | ೧೦೬೯ | ೧೩೫೧ | ೧೫೬೮ | ೧೭೪೪ |
| ಬ್ಯಾಂಕುಗಳು | (೪೮) | (೪೭) | (೪೮) | (೪೭) | (೪೮) | (೪೬) | (೪೩) |
| ಗ್ರಾಮೀಣ | ಲಭ್ಯವಿಲ್ಲ | ೫೪ | ೮೯ | ೧೫೮ | ೨೪೨ | ೩೨೨ | ೪೧೩ |
| ಬ್ಯಾಂಕುಗಳು | | (೪೮) | (೫೦) | (೪೮) | (೫೦) | (೫೨) | (೫೧) |
| ಪ್ರಾ.ಬೇ.ಪ. | ೫೬೧ | ೧೩೭೬ | ೧೨೦೫ | ೧೩೦೮ | ೧೫೭ | ೧೬೩೦ | ೧೮೦ |
| ಸಹಕಾರಿ ಸಂಸ್ಥೆಗಳು | (೩೪) | (೪೩) | (೫೦) | (೪೦) | (೪೩) | (೪೨) | (೪೧) |
| ಭೂ. ಅಭಿವೃದ್ಧಿ | ೯೨ | ೨೯೧ | ೨೫೨ | ೨೬೯ | ೨೬೭ | ೨೮೫ | ೨೯೮ |
| ಬ್ಯಾಂಕುಗಳು | (೩೪) | (೪೬) | (೪೦) | (೪೪) | (೩೬) | (೪೦) | (೩೯) |

ಮೇಲೆ ಹೇಳಿದ ಅಂಕಿ ಅಂಶಗಳಂತೆ ಸುಸ್ತಿ ಸಾಲದ ಬಾಕಿ ಎಲ್ಲಾ ರೀತಿಯ ಸಾಲದ ಸಂಸ್ಥೆಗಳೂ ಹೊಂದಿರುವುದರಿಂದ ಸಹಕಾರಿ ಸಂಘಗಳಿಗೆ ಹಾಗೂ ವಾಣಿಜ್ಯ ಬ್ಯಾಂಕುಗಳಿಗೆ ಏಕರೂಪವಾದ ಒಂದು ಕಾನೂನನ್ನು ರಚಿಸುವುದು ಅವಶ್ಯಕ. ಅಲ್ಲದೆ ರಾಜ್ಯ ಮಟ್ಟದಲ್ಲಿ ಸಾಲ ವಸೂಲಿಯ ವ್ಯಾಜ್ಯಗಳನ್ನು ತೀವ್ರವಾಗಿ ಬಗೆಹರಿಸಲು ನ್ಯಾಯಮಂಡಳಿಗಳನ್ನು ರಚಿಸಬೇಕು ಹಾಗೂ ಪ್ರತಿ ರಾಜ್ಯದ ಸರಕಾರದಲ್ಲಿ ಸಾಲದ ವ್ಯಾಜ್ಯಗಳ ಅಮಲು ಬಜಾವಣೆಗಳಿಗಾಗಿ ಪ್ರತ್ಯೇಕ ಇಲಾಖೆಯನ್ನು ರಚಿಸಬೇಕು.

### ವಾಣಿಜ್ಯ ಬ್ಯಾಂಕುಗಳ ಶಾಖಾ ವ್ಯವಸ್ಥಾಪಕರಿಗೆ ವಿಶೇಷ ಸವಲತ್ತುಗಳು

ವಾಣಿಜ್ಯ ಬ್ಯಾಂಕುಗಳ ಶಾಖೆಗಳಲ್ಲಿ ಅವುಗಳ ಸಿಬ್ಬಂದಿ ವರ್ಗದವರನ್ನು ಮನಃಪೂರ್ವಕವಾಗಿ ಸೇವೆ ಸಲ್ಲಿಸುವಂತೆ ಉತ್ತೇಜಿಸುವ ಸಲುವಾಗಿ ಅವರಿಗೆ ಕೆಲವೊಂದು ವಿಶೇಷ ಸವಲತ್ತುಗಳನ್ನು ಒದಗಿಸಬೇಕು. ಅವುಗಳಲ್ಲಿ–

ಗ್ರಾಮೀಣ ಶಾಖಾ ವ್ಯವಸ್ಥಾಪಕನಿಗೆ ಪುಕ್ಕಟೆಯಾಗಿ ವಸತಿ ಸೌಲಭ್ಯವನ್ನು ಒದಗಿಸಬೇಕು. ಅದರ ಬಾಡಿಗೆಯನ್ನು ಅವನ ಸಂಬಳದಲ್ಲಿ ಮುರಿಯಬಾರದು.

ಕನಿಷ್ಠ ಮೂರು ವರ್ಷಗಳವರೆಗೆ ಗ್ರಾಮಾಭಿವೃದ್ಧಿ ಸಾಲ ಹಂಚುವಲ್ಲಿ ಹೆಚ್ಚು ಯಶಸ್ವಿಯಾಗಿ ಸೇವೆ ಸಲ್ಲಿಸಿದ ವ್ಯವಸ್ಥಾಪಕನಿಗೆ ಒಂದು ವಾರ್ಷಿಕ ಸಂಬಳದ ಬಡ್ತಿ ಒದಗಿಸಬೇಕು. ಅವನಿಗೆ ಮೂರು ವರ್ಷದ ನಂತರ ಅವನು ಕೇಳಿದ ಗ್ರಾಮೀಣ ಶಾಖೆಗೆ ವರ್ಗಾಯಿಸಬೇಕು.

೧೦೦೦ಕ್ಕಿಂತ ಹೆಚ್ಚು ಖಾತೆಗಳಿರುವ ಹಾಗೂ ೫೦ ಲಕ್ಷ ರೂಗಳಿಗಿಂತ ಹೆಚ್ಚು ಸಾಲ ಹಂಚಿದ ಶಾಖೆಗಳಲ್ಲಿ ಇಬ್ಬರು ಅಧಿಕಾರಿಗಳಿರಬೇಕು.

### ಗಣಕಗಳ ಬಳಕೆ

ಗಣಕಗಳ ಬಳಕೆ ಜಿಲ್ಲಾ ಮಟ್ಟದಲ್ಲಿರಬೇಕು. ಆದರೆ ಗ್ರಾಮೀಣ ಶಾಖೆಗಳಲ್ಲಿ ಇವುಗಳ ಬಳಕೆಯ ಅಗತ್ಯ ಅಷ್ಟಾಗಿ ಕಂಡು ಬರುವುದಿಲ್ಲ. ಆದ್ದರಿಂದ ಗಣಕ ಬಳಕೆಯನ್ನು ಜಿಲ್ಲಾ ಮಟ್ಟದಲ್ಲಿಡಬೇಕೆಂದು ಶಿಫಾರಸು ಮಾಡಿದೆ.

### ಸೇವಾ ಕ್ಷೇತ್ರದ ಬದಲು ಅಭಿವೃದ್ಧಿ ಯೋಜನಾ ಕ್ಷೇತ್ರ

ಈ ಸಮಿತಿಯು ಸೇವಾ ಕ್ಷೇತ್ರದ ಅಗತ್ಯವನ್ನು ಪ್ರಶಂಸಿಸಿದೆಯಾದರೂ ಈ ಯೋಜನೆಯನ್ನು ಇನ್ನೂ ಪರಿಣಾಮಕಾರಿಯಾಗಿಸಲು ಇದನ್ನು ಅಭಿವೃದ್ಧಿ ಯೋಜನಾ ಕ್ಷೇತ್ರವನ್ನಾಗಿ ಮಾರ್ಪಡಿಸಬೇಕು. ಅಲ್ಲದೆ ಪ್ರತಿ ಹಳ್ಳಿಯನ್ನೂ ವಾಣಿಜ್ಯ ಬ್ಯಾಂಕಿನ ಗ್ರಾಮೀಣ ಶಾಖೆಗೆ ಸೇರಿಸಿದರೂ ಒಂದು ತಾಲ್ಲೂಕನ್ನು ಮಾತ್ರ ಅನೇಕ ಬ್ಯಾಂಕುಗಳಿಗೆ ಸೇರಿಸದೆ ಹೆಚ್ಚು ವ್ಯವಹಾರವನ್ನು ಹೊಂದಿದ ಬ್ಯಾಂಕಿನ ಒಂದು ಶಾಖೆಗೆ ಸೇರಿಸಬೇಕು. ಇದರಿಂದ ಮೇಲ್ವಿಚಾರಣೆ ಸುಲಭವಾಗುವುದೆಂದು ಈ ಸಮಿತಿ ಅಭಿಪ್ರಾಯಪಟ್ಟಿದೆ.

### ಸಹಕಾರಿ ಸಂಘ ಹಾಗೂ ಬ್ಯಾಂಕುಗಳ ಬಗ್ಗೆ ಇದ್ದ ಶಿಫಾರಸುಗಳು

ಈ ಸಮಿತಿಯು ಪ್ರಾಥಮಿಕ ಸಹಕಾರಿ ಕೃಷಿ ಪತ್ತಿನ ಸಂಘಗಳ ಬಗ್ಗೆ, ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳ ಬಗ್ಗೆ, ರಾಜ್ಯ ಸಹಕಾರಿ ಬ್ಯಾಂಕುಗಳ ಬಗ್ಗೆ ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳ ಬಗ್ಗೆ ಅನೇಕ ಶಿಫಾರಸುಗಳನ್ನು ಮಾಡಿದೆ. ಅದರಲ್ಲಿ ಪ್ರಮುಖವಾದ ಕೆಲವನ್ನು ಇಲ್ಲಿ ಕೊಡಲಾಗಿದೆ.

### ಸಹಕಾರಿ ಸಂಘಗಳ ಆಡಳಿತದಲ್ಲಿ ಸರಕಾರದ ಹಸ್ತಕ್ಷೇಪ

ಸಹಕಾರಿ ಪತ್ತಿನ ಕ್ಷೇತ್ರದಲ್ಲಿ ಸಹಕಾರಿ ಸಂಘಗಳ ಚುನಾಯಿತ ಪ್ರತಿನಿಧಿಗಳ ಆಡಳಿತ ಸಮಿತಿಗಳನ್ನು ಸರಕಾರ ರದ್ದುಪಡಿಸುವುದು ಇತ್ತೀಚಿನ ವರ್ಷಗಳಲ್ಲಿ ಅತಿ ಹೆಚ್ಚಾಗಿದೆ. ಇದು ಸಹಕಾರಿ ಸಂಘಗಳ ಮೂಲ ತತ್ತ್ವಕ್ಕೆ ಆಘಾತವನ್ನುಂಟುಮಾಡಿದೆ.

ಚುನಾಯಿತ ಆಡಳಿತ ಸಮಿತಿಗಳನ್ನು ಸರಕಾರ ರದ್ದುಪಡಿಸುವುದು ಈ ಸಂಸ್ಥೆಗಳ ಬೆಳವಣಿಗೆಗೆ ಆತಂಕವಾಗಿರುವುದು. ಸರಕಾರದ ಈ ಪದ್ಧತಿಯಿಂದ ಸದಸ್ಯರು ತಮ್ಮ ಚುನಾಯಿತ ಪ್ರತಿನಿಧಿಗಳಲ್ಲಿಟ್ಟಿರುವ ನಂಬಿಕೆಗೆ ಭಂಗ ಬರುವಂತಾಗಿದೆ. ಆದ್ದರಿಂದ ಸರಕಾರ ಸಹಕಾರಿ ಕಾನೂನಿನ ಮೇರೆಗೆ ಇಂಥ ಚುನಾಯಿತ ಆಡಳಿತ ಸಮಿತಿಗಳನ್ನು ರದ್ದುಪಡಿಸುವುದನ್ನು ನಿಲ್ಲಿಸಬೇಕು.

ಸರಕಾರ ಅಥವಾ ಸಹಕಾರಿ ಸಂಘಗಳ ನಿಬಂಧಕರು (ರಿಜಿಸ್ಟ್ರಾರರು) ಈ ಸಂಘಗಳ ಆಂತರಿಕ ಆಡಳಿತದಲ್ಲಿ ಕೈಹಾಕಬಾರದು. ಸಹಕಾರಿ ಪತ್ತಿನ ವ್ಯವಸ್ಥೆ ಹೆಚ್ಚು ಬಲಶಾಲಿಯಾಗಿ ಬೆಳೆದು ಬರುವ ದಿಸೆಯಿಂದ ಈ ಸಂಸ್ಥೆಗಳ ಆಡಳಿತ ಸಮಿತಿಗಳನ್ನು ರದ್ದುಪಡಿಸುವ ಸರಕಾರದ ಹಾಗೂ ರಿಜಿಸ್ಟ್ರಾರ್ ಅವರ ಈ ಅಧಿಕಾರಗಳನ್ನು ತೆಗೆದುಹಾಕಬೇಕು. ಈ ಬಗ್ಗೆ ಸಹಕಾರಿ ಕಾನೂನಿನಲ್ಲಿ ಸೂಕ್ತ ತಿದ್ದುಪಡಿ ಆಗಬೇಕು.

ಸಹಕಾರಿ ಪತ್ತಿನ ಸಂಘಗಳು ಹಾಗೂ ಇತರ ಎಲ್ಲಾ ರೀತಿಯ ಸಹಕಾರಿ ಸಂಘಗಳ ಸಮಿತಿಗಳಿಂದು ರಾಜಕೀಯದಿಂದ ಕೂಡಿದ್ದು ಸರಕಾರ ಬದಲಾದಂತೆ ಅವುಗಳೂ ಬದಲಾಗುತ್ತವೆ. ರಾಜಕೀಯ ಭವಿಷ್ಯವನ್ನು ಕಾಯ್ದುಕೊಳ್ಳುವುದಕ್ಕಾಗಿ ರಾಜ್ಯ ಸರಕಾರಗಳು ಒಟ್ಟಾರೆ ಸಾಲ ಮನ್ನಾ ಮಾಡುವ ಬಗ್ಗೆ ಪ್ರಕಟಪಡಿಸುವ ಪ್ರವೃತ್ತಿ ಪತ್ತಿನ ವ್ಯವಸ್ಥೆಗೆ ಅಧಿಕ ಮಟ್ಟದ ಧಕ್ಕೆಯನ್ನುಂಟು ಮಾಡಿದೆ. ರಾಜ್ಯ ಸರಕಾರಗಳು ಸಾಲದ ಮೇಲಿನ ಬಡ್ಡಿಯಲ್ಲಿ ರಿಯಾಯಿತಿ ತೋರಿಸುವುದರಿಂದ ಸಹಕಾರಿ ಸಂಘಗಳ ಲಾಭಕ್ಕೆ ಹಾನಿಯಾಗುವುದಾದರೆ ಅದನ್ನು ನಿಲ್ಲಿಸಬೇಕು. ಈ ಬಡ್ಡಿ ರಿಯಾಯಿತಿಗಳು ಹಣಕಾಸಿನ ಮಾರುಕಟ್ಟೆಯ ಬಡ್ಡಿ ದರಕ್ಕಿಂತ ಕಡಿಮೆ ಆಗುವುದರಿಂದ ಸಹಕಾರಿ ಸಂಘದ ಸಾಲದ ದುರುಪಯೋಗ ಆಗುವುದು.

ಸಹಕಾರಿ ಸಂಘಗಳ ಆಡಳಿತ ಸಮಿತಿಗಳನ್ನು ರದ್ದುಪಡಿಸುವುದು ಅವಶ್ಯಕವೆಂದು ಕಂಡುಬಂದರೆ ಸಮಿತಿಯನ್ನು ರದ್ದುಪಡಿಸಿ ಆಡಳಿತಾಧಿಕಾರಿಗಳನ್ನು ನೇಮಿಸುವುದು ಅವಶ್ಯಕವಾಗಿದ್ದರೂ, ಆ ಆಡಳಿತಾಧಿಕಾರಿಗಳ ಅವಧಿ ಆರು ತಿಂಗಳುಗಳಿಗಿಂತ ಹೆಚ್ಚಾಗಬಾರದು. ಅಲ್ಲದೆ ಪ್ರಾಥಮಿಕ ಸಹಕಾರಿ ಸಂಘಗಳ ಆಡಳಿತ ಸಮಿತಿ ರದ್ದಾದರೆ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಅವುಗಳಿಗೆ ಆಡಳಿತಾಧಿಕಾರಿಗಳನ್ನು ನೇಮಿಸಬೇಕು.

ಸಹಕಾರಿ ಸಂಘಗಳಲ್ಲಿ ಸರಕಾರದ ಅಧಿಕಾರೀಕರಣ ಹಾಗೂ ರಾಜಕಾರಣ ಸಹಕಾರಿ ಸಂಘಗಳ ಬಲಹೀನತೆಗೆ ಬಹುಮಟ್ಟಿಗೆ

ಕಾರಣವಾಗಿದ್ದು ಇದನ್ನು ತಗ್ಗಿಸದಿದ್ದರೆ ಸಹಕಾರಿ ಕ್ಷೇತ್ರ ಗಂಡಾಂತರಕ್ಕೀಡಾಗಬಹುದು.

**ಕೃಷಿ ಸಾಲ ಒದಗಿಸುವ ಸಹಕಾರಿ ಪತ್ತಿನ ಸಂಘಗಳು ಬ್ಯಾಂಕುಗಳನ್ನು ಒಂದುಗೂಡಿಸುವ ಬಗ್ಗೆ**

ಮೂರು ಹಂತಗಳಿಂದ ಕೂಡಿದ ಕೃಷಿ ಸಹಕಾರ ಪತ್ತಿನ ರಚನೆಯು ಅತಿ ಸಮಂಜಸವೂ ಅನೇಕ ಉಪಯುಕ್ತತೆಗಳಿಂದ ಕೂಡಿದ್ದೂ ಆಗಿರುವುದರಿಂದ ಈ ವ್ಯವಸ್ಥೆಯನ್ನು ಕೈಬಿಡಲಾಗದು. ಅಲ್ಪಾವಧಿ ಕೃಷಿ ಸಾಲ ಒದಗಿಸುವ ಸಹಕಾರಿ ಸಂಘಗಳು ಬ್ಯಾಂಕುಗಳು ಹಾಗೂ ದೀರ್ಘಾವಧಿ ಬೇಸಾಯ ಸಾಲ ಒದಗಿಸುವ ಭೂ ಅಭಿವೃದ್ಧಿ ಬ್ಯಾಂಕುಗಳು ಹೀಗೆ ಕೃಷಿ ಸಾಲದ ಎರಡೂ ವಲಯದ ಸಹಕಾರಿ ಸಂಸ್ಥೆಗಳಿಂದು ಅಶಕ್ತ ಸಂಸ್ಥೆಗಳಾಗಿರುವುದರಿಂದ ಅವುಗಳನ್ನಿಂದು ಒಂದುಗೂಡಿಸುವುದು ಸರಿಯಾಗಲಾರದು. ಈ ಎರಡೂ ವಲಯದ ಸಂಸ್ಥೆಗಳು ಶಕ್ತಿಯುತವಾಗುವವರೆಗೆ ಇವುಗಳನ್ನು ಹೀಗೆಯೇ ಮುಂದುವರಿಸಿಕೊಂಡು ಹೋಗಬೇಕು.

ಅಲ್ಪಾವಧಿ ಹಾಗೂ ದೀರ್ಘಾವಧಿ ಸಾಲ ಒದಗಿಸುವ ಎರಡೂ ವಲಯ ಕೃಷಿ ಸಾಲದ ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಪರಸ್ಪರ ಹೊಂದಾಣಿಕೆ ಹಾಗೂ ಸಮನ್ವಯ ರೂಪಿತವಾಗಬೇಕು.

ಅತಿ ಹೆಚ್ಚು ಯಶಸ್ವಿಯಾಗಿ ಸೇವೆ ಸಲ್ಲಿಸುತ್ತಿರುವ ಪ್ರಾಥಮಿಕ ಬೇಸಾಯ ಸಹಕಾರಿ ಪತ್ತಿನ ಸಂಘಗಳಿಗೆ ದೀರ್ಘಾವಧಿ ಸಾಲ ಒದಗಿಸಲು ಪರವಾನಗಿ ಕೊಡಬೇಕು.

**ಬೇಸಾಯ ಸಾಲದ ಬಡ್ಡಿ ದರ**

ಬೇಸಾಯ ಸಾಲ ಹಂಚುವ ಸಂಸ್ಥೆಗಳು ಯಶಸ್ವಿಯಾಗಿ ಸಮರ್ಥವಾಗಿ ಬೆಳೆದು ಬರಬೇಕಾದರೆ ಅವುಗಳು ಹಂಚುವ ಸಾಲದ ಮೇಲೆ ಹಾಕುವ ಲಾಭಾಂಶ ಹಾಲಿ ಇದ್ದ ದರಕ್ಕಿಂತ ಇನ್ನೂ ಹೆಚ್ಚಾಗಬೇಕು. ಈ ಸಮಿತಿಯು ರಾಜ್ಯ ಸಹಕಾರಿ ಬ್ಯಾಂಕು ತನ್ನ ಸಾಲದ ಮೇಲೆ ಶೇ. ೧.೫ ರಂತೆ ದರವನ್ನೂ ಹಾಗು ಜಿಲ್ಲಾ ಮಧ್ಯವರ್ತಿ ಬ್ಯಾಂಕು ಶೇ.೩.೫ ರಂತೆ ದರವನ್ನೂ ಹಾಗೂ ಪ್ರಾಥಮಿಕ ಬೇಸಾಯ ಪತ್ತಿನ ಸಂಘಗಳು ಶೇ. ೬ ರಷ್ಟು ಬಡ್ಡಿ ದರವನ್ನೂ ವಿಧಿಸಬೇಕೆಂದು ಶಿಫಾರಸು ಮಾಡಿದೆ. ಆದರೆ ರೈತನಿಗೆ ಅಂತಿಮವಾಗಿ ಶೇ. ೧೫.೫ ಕ್ಕಿಂತ ಹೆಚ್ಚಾಗಕೂಡದು. ಆದರೆ ಈ ಸಮಿತಿಯು ಗ್ರಾಮೀಣ ಬ್ಯಾಂಕುಗಳಿಗೆ ಶೇ. ೮.೬೫ ರಷ್ಟು ಹಾಗೂ ವಾಣಿಜ್ಯ ಬ್ಯಾಂಕುಗಳಿಗೆ ಶೇ. ೭ ರಷ್ಟು ಬಡ್ಡಿ ದರ ಹೇರಲು ಶಿಫಾರಸು ಮಾಡಿದೆ. ಅದರಂತೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ಶೇ. ೫ ಅಥವಾ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕು ಇರದಿದ್ದರೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ಶೇ. ೫.೫ ರಷ್ಟು ಬಡ್ಡಿ ದರವನ್ನು ದೀರ್ಘಾವಧಿ ಸಾಲಕ್ಕೆ ವಿಧಿಸಬೇಕೆಂದು ಶಿಫಾರಸು ಮಾಡಿದೆ.

**ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಬಗ್ಗೆ ಶಿಫಾರಸುಗಳು**

ಈ ಸಂಘಗಳ ಸ್ವಸಾಮರ್ಥ್ಯವನ್ನು ಅವುಗಳು ಪೂರ್ಣಾವಧಿ ಹಾಗೂ ಸಂಬಳ ಪಡೆಯುವ ಕಾರ್ಯದರ್ಶಿಯನ್ನು ನೇಮಿಸಿಕೊಳ್ಳುವ ಸ್ವಂತ ಕಟ್ಟಡ ಹೊಂದುವ, ತಮ್ಮ ವಾರ್ಷಿಕ ಲಾಭದಲ್ಲಿ ಕಾಯ್ದಿಟ್ಟ ನಿಧಿ, ಇತರೆ ನಿಧಿಗಳನ್ನು ತೆಗೆದಿರಿಸುವ ಹಾಗೂ ಸದಸ್ಯರಿಗೆ ಡಿವಿಡೆಂಡ್ ಹಂಚುವ ಸಾಮರ್ಥ್ಯದಿಂದ ಗುರುತಿಸಬೇಕು.

ಭಾರತದ ರಿಸರ್ವ್ ಬ್ಯಾಂಕು ಈ ಸಂಘಗಳ ಪುನರ್ ರಚನೆಗಾಗಿ ತಿಳಿಸುವ ಮಾರ್ಗದರ್ಶನಗಳನ್ನು ನಿಖರವಾಗಿ ಅನುಸರಿಸಬೇಕು. ಹಾಗೂ ಎಲ್ಲಿ ಈ ಸಂಸ್ಥೆಗಳು ಪುನರ್ರಚನೆ ಆಗಿರುವುದಿಲ್ಲವೋ ಅಲ್ಲಿ ತ್ವರಿತವಾಗಿ ಆಗಬೇಕು.

ಈ ಸಂಘಗಳು ಬೇಗನೆ ಸ್ವಸಾಮರ್ಥ್ಯವನ್ನು ಹೊಂದುವಂತೆ ಆಗಲು ಪ್ರತಿಯೊಂದು ಸಂಘಕ್ಕೆ ಒಂದು ಕಾರ್ಯತತ್ಪರತಾ ಯೋಜನೆ ಕೈಗೊಳ್ಳಬೇಕು. ಈ ಸಂಘಗಳ ಸ್ವಸಾಮರ್ಥ್ಯ ಅವು ಮುಂದಿನ ವರ್ಷಗಳಲ್ಲಿ ಅಭಿವೃದ್ಧಿ ಸಾಧಿಸುವ ಸಾಮರ್ಥ್ಯವನ್ನು ಒಳಗೊಂಡಿರಬೇಕು. ಈ ಸಂಸ್ಥೆಗಳು ವ್ಯವಸಾಯೇತರ ಚಟುವಟಿಕೆಗಳಿಗಾಗಿಯೂ ಸಾಲ ಒದಗಿಸಬೇಕು. ಆದರೆ ಸುಸ್ತಿ ಸಾಲ ಆಗದಂತೆ ಎಚ್ಚರ ವಹಿಸಬೇಕು. ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಈ ಸಂಸ್ಥೆಗಳ ಕಾರ್ಯಾಚರಣೆಗಳ ಮೇಲೆ ಉಸ್ತುವಾರಿ ಹೊಂದಬೇಕು.

ಪ್ರತಿಯೊಂದು ಸಹಕಾರಿ ಸಂಘ ಪೂರ್ಣಾವಧಿಯ ವೇತನದಾರಿ ಕಾರ್ಯದರ್ಶಿಯನ್ನು ನೇಮಿಸಿಕೊಳ್ಳಬೇಕು.

ಈ ಸಹಕಾರಿ ಸಂಘಗಳ ಕಾರ್ಯದರ್ಶಿಗಳನ್ನು ನೇಮಿಸಿಕೊಳ್ಳುವ ಬಗ್ಗೆ ಇರುವ ಕೇಡರ್ ಪದ್ಧತಿಯನ್ನು ಕೈಬಿಡಬೇಕು. ಸಂಘಗಳೇ ತಮ್ಮ ಕಾರ್ಯದರ್ಶಿಗಳನ್ನು ನೇಮಿಸಿಕೊಳ್ಳುವ ಸ್ವತಂತ್ರ ಅಧಿಕಾರವನ್ನು ಅವುಗಳಿಗೆ ಕೊಡಬೇಕು. ಇಲ್ಲದಿದ್ದರೆ ಈ ಸಂಘಗಳ ಕಾರ್ಯಾಚರಣೆಗಳಿಗಾಗಿ ಅವುಗಳ ನಿರ್ದೇಶಕರನ್ನು ಜವಾಬ್ದಾರರನ್ನಾಗಿ ಮಾಡುವುದು ತೊಂದರೆ ಆಗುತ್ತದೆ.

ಕೆಲವೊಂದು ಅಶಕ್ತ ಸಂಘಗಳಿಗೆ ಅವುಗಳ ಕಾರ್ಯದರ್ಶಿಗಳಿಗೆ ವೇತನ ಕೊಡಲು ಹಣಕಾಸಿನ ಕೊರತೆ ಆದಾಗ, ಅಂತಹ ಕೊರತೆ ಆಗುವ ಸಂಬಳದ ಹಣವನ್ನು ಒದಗಿಸಲು ರಾಜ್ಯ ಸಹಕಾರಿ ಬ್ಯಾಂಕುಗಳು, ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಹಾಗೂ ಪ್ರಾಥಮಿಕ ಸಹಕಾರಿ ಸಂಘಗಳು ಕೂಡಿ ಒಂದು ನಿಧಿಯನ್ನು ನಿರ್ಮಿಸಬೇಕು. ಇದನ್ನು ಜಿಲ್ಲಾ ಮಧ್ಯವರ್ತಿ ಬ್ಯಾಂಕಿನಲ್ಲಿಡಬೇಕು. ಇದಕ್ಕೆ ರಾಜ್ಯ ಹಾಗೂ ಮಧ್ಯವರ್ತಿ ಬ್ಯಾಂಕುಗಳು ಅವುಗಳಿಗೆ ಈ ಸಂಘಗಳಿಂದ ಬರಬೇಕಾದ ಒಟ್ಟು ಸಾಲದ ಶೇ. ೧/೪ ಹಾಗೂ ೧/೮ ರಷ್ಟು ಹಣವನ್ನು ಪ್ರತಿವರ್ಷ ಜಮಾ ಮಾಡಬೇಕು. ಈ ನಿಧಿಗೆ ಈ ಸಂಘಗಳೂ ಕೆಲವೊಂದು ಹಣವನ್ನು ಜಮಾಯಿಸಬೇಕು. ಅಲ್ಲದೆ ರಾಜ್ಯ ಸರ್ಕಾರಗಳೂ ಸಹ ಕೆಲವೊಂದು ಹಣವನ್ನು ಈ ನಿಧಿಗೆ ಒದಗಿಸಬೇಕು.

ಈ ಪ್ರಾಥಮಿಕ ಸಂಘಗಳ ಕಾರ್ಯದರ್ಶಿಗಳಿಗೆ ಬಡ್ತಿಯ

ಅವಕಾಶ ಹೆಚ್ಚಿಸಲು ಇಂತಹ ದೊಡ್ಡ ಪ್ರಮಾಣದ ಸಂಘಗಳಿಗೆ ಕಾರ್ಯದರ್ಶಿಗಳನ್ನು ನೇಮಿಸಿಕೊಳ್ಳುವಾಗ ಇಂಥ ಸಣ್ಣ ಸಂಘಗಳ ಕಾರ್ಯದರ್ಶಿಗಳನ್ನು ಆದ್ಯತೆಯ ಮೇರೆಗೆ ನೇಮಿಸಿಕೊಳ್ಳಬೇಕು. ಅಲ್ಲದೆ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ತಮ್ಮ ಕೆಲವೊಂದು ಸಿಬ್ಬಂದಿ ಆಯ್ಕೆ ಮಾಡಿಕೊಳ್ಳುವಾಗ ಉತ್ತಮ ಸೇವೆ ಸಲ್ಲಿಸುತ್ತಿರುವ ಈ ಸಂಘಗಳ ಕಾರ್ಯದರ್ಶಿಗಳಿಗೆ ಆದ್ಯತೆ ನೀಡಬೇಕು.

ಸಂಘದ ವ್ಯವಹಾರವನ್ನು ಅನೇಕ ರೀತಿಯಲ್ಲಿ ಹೆಚ್ಚಿಸಿಕೊಂಡು ಅದರ ವಾರ್ಷಿಕ ಲಾಭದ ಹೆಚ್ಚಳಕ್ಕೆ ಕಾರಣವಾದ ಅಂತಹ ಸಂಘಗಳ ಕಾರ್ಯದರ್ಶಿಗಳಿಗೆ ಉತ್ತೇಜನ ಕೊಡಲು ಲಾಭದಲ್ಲಿ ಕೆಲವೊಂದು ಪ್ರತಿಶತ ಹಣವನ್ನು ಪ್ರೋತ್ಸಾಹ ಧನವೆಂದು ಕೊಡಬೇಕು. ಈ ಎರಡೂ ರೀತಿಯ ಸಂಬಳದ ಹಣವನ್ನು ಕೊಡುವ ಮೊದಲು ರಾಜ್ಯ ಸಹಕಾರಿ ಬ್ಯಾಂಕುಗಳು ಸಹಕಾರಿ ಸಂಘಗಳ ನಿಬಂಧಕರೊಂದಿಗೆ ಸಮಾಲೋಚಿಸಿ ನಿರ್ಧರಿಸಬೇಕು.

ಪ್ರಾಥಮಿಕ ಸಹಕಾರಿ ಸಂಘಗಳ ಕಾರ್ಯದರ್ಶಿಗಳಿಗೆ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಸೂಕ್ತ ತರಬೇತಿ ವ್ಯವಸ್ಥೆ ಮಾಡಬೇಕು.

### ಠೇವಣಿ ಸಂಗ್ರಹ

ಪ್ರಾಥಮಿಕ ಬೇಸಾಯ ಪತ್ತಿನ ಸಹಕಾರಿ ಸಂಘಗಳು ಗ್ರಾಮೀಣಪ್ರದೇಶದಲ್ಲಿ ಅಧಿಕ ಪ್ರಮಾಣದಲ್ಲಿ ಠೇವಣಿ ಸಂಗ್ರಹಿಸುವುದನ್ನು ಪ್ರೋತ್ಸಾಹಿಸಬೇಕು.

ಪ್ರತಿಯೊಂದು ಸಂಘದ ನಿವೇಶನದ ಒಳ ರಚನೆ ಬ್ಯಾಂಕಿನ ಸ್ವರೂಪವನ್ನು ಹೊಂದಬೇಕು. ಇದಕ್ಕೆ ಸರಕಾರ ಹಾಗು ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ ಸಾಲ ಒದಗಿಸಬೇಕು.

ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಪಡೆಯುವ ಠೇವಣಿಗಳಿಗೆ ಭಾರತದ ಠೇವಣಿ ವಿಮಾ ಮತ್ತು ಸಾಲ ಖಾತರಿ ನಿಗಮ ತನ್ನ ಠೇವಣಿ ವಿಮಾ ಯೋಜನೆಯನ್ನು ವಿಸ್ತರಿಸಬೇಕು. ಇದು ದೊರೆಯುವವರೆಗೆ ರಾಜ್ಯ ಸಹಕಾರಿ ಬ್ಯಾಂಕುಗಳು ತಮ್ಮ ರಾಜ್ಯ ಸರಕಾರದೊಡನೆ ಒಂದು ಯೋಜನೆ ಕೈಗೊಂಡು ಠೇವಣಿ ವಿಮಾ ಸವಲತ್ತನ್ನು ಇವುಗಳಿಗೆ ಒದಗಿಸಿಕೊಡಬೇಕು.

ಠೇವಣಿ ಸಂಗ್ರಹಣೆಯಲ್ಲಿ ತೊಡಗಿದ ಈ ಸಂಘಗಳು ಅವು ಸಂಗ್ರಹಿಸಿದ ಠೇವಣಿಯಲ್ಲಿ ಶೇ. ೧೫ ರಷ್ಟನ್ನು ದ್ರವತ್ವರೂಪದಲ್ಲಿ ಅವುಗಳನ್ನು ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಲ್ಲಿ ವಿಶೇಷ ಉಳಿತಾಯ ಖಾತೆಯಲ್ಲಿ ಠೇವಣಿ ಆಗಿ ಇಡಬೇಕು. ಈ ವಿಶೇಷ ಉಳಿತಾಯ ಖಾತೆಯ ಠೇವಣಿಗೆ ಆಯಾ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಇತರ ಉಳಿತಾಯ ಠೇವಣಿಗೆ ಬಡ್ಡಿ ದರಕ್ಕಿಂತ ಶೇ. ೧.೫ ರಷ್ಟು ಹೆಚ್ಚು ಬಡ್ಡಿ ಕೊಡಬೇಕು.

ಈ ಸಂಸ್ಥೆಗಳು ಹೊಂದುವ ಒಟ್ಟು ಠೇವಣಿಯಲ್ಲಿ ಶೇ. ೨೦ ರಷ್ಟು ಹಣವನ್ನು ಹೆಚ್ಚು ಲಾಭ ಪಡೆಯಲು ಸಾಧ್ಯವಿದ್ದ ಕೃಷೀತರ ವಲಯಗಳ ಚಟುವಟಿಕೆಗಳಿಗೆ ಸಾಲ ಕೊಡಬಹುದು.

ರಾಜ್ಯ ಸಹಕಾರಿ ಬ್ಯಾಂಕುಗಳು ಹಾಗೂ ಮಧ್ಯವರ್ತಿ ಬ್ಯಾಂಕುಗಳು ಪ್ರಾಥಮಿಕ ಬೇಸಾಯ ಪತ್ತಿನ ಸಂಘಗಳಿಗೆ ಬ್ಯಾಂಕಿಂಗ್ ಕೌಂಟರ್ ತೆರೆಯಲು, ಗಿರವಿಯಾಗಿ ಇಡುವ ನಗ-ನಾಣ್ಯಗಳ ಸುಭದ್ರತೆಗಾಗಿ ಭದ್ರತಾ ಕಪಾಟು ಮುಂತಾದ ಸಾಧನ ಸೌಲಭ್ಯಗಳನ್ನು ಒದಗಿಸಿಕೊಡಬೇಕು. ಇದಕ್ಕಾಗಿ ರಾಜ್ಯ ಹಾಗೂ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಸಹಕಾರಿ ಅಭಿವೃದ್ಧಿ ನಿಧಿಯನ್ನು ತೆರೆಯಬೇಕು.

### ಇತರ ಶಿಫಾರಸುಗಳು

ಒಂದಕ್ಕಿಂತ ಹೆಚ್ಚು ಬೆಳೆಗಳನ್ನು ಬೆಳೆಯುವ ಭಾಗಗಳಲ್ಲಿರುವ ಈ ಸಂಘಗಳು ನಗದು ಸಾಲ ಒದಗಿಸಲು ಪ್ರಾರಂಭಿಸಬೇಕು.

ಯಾವುದೇ ಭಾಗದಲ್ಲಿ ರೈತರು ರಸಗೊಬ್ಬರ, ಅಧಿಕ ಇಳುವರಿ ಬೀಜ ಮುಂತಾದವುಗಳನ್ನು ಉಪಯೋಗಿಸಿ ಮಾದರಿ ಬೇಸಾಯವನ್ನು ಈಗಾಗಲೇ ಅನುಸರಿಸುತ್ತಿದ್ದರೆ ಅಂತಹ ಭಾಗದ ರೈತರಿಗೆ ವಸ್ತುವಾಚಕ ಸಾಲ ಅಂದರೆ ಗೊಬ್ಬರ, ಬೀಜ, ಕ್ರಿಮಿನಾಶಕ ಮುಂತಾದವುಗಳನ್ನು ಪಡೆಯಲು ಒತ್ತಾಯಿಸಬಾರದು.

ಮುಂಗಾರು ಸಾಲದ ನಗದು ಸಾಲದ ಹಣವನ್ನು ಕೊಡದ ಹೊರತು, ಹಿಂಗಾರು ಸಾಲದ ನಗದು ಸಾಲದ ಹಣವನ್ನು ಕೊಡಬಾರದೆಂಬ ಕಟ್ಟಳೆಯನ್ನು ಕೈಬಿಡಬೇಕು.

ಹಿಂಗಾರು ಸಾಲದ ಮರುಪಾವತಿಯ ಅವಧಿಯನ್ನು ಜೂನ್ ೩೦ ರಿಂದ ಆಗಸ್ಟ್ ೩೧ರವರೆಗೆ ಬದಲಾಯಿಸಬೇಕು.

ಪ್ರತಿವರ್ಷ ಈ ಸಂಸ್ಥೆಗಳು ಕ್ರಮಿಕ ಪತ್ತು ತಯಾರಿಸಲು ವಿಳಂಬವಾಗುವುದರಿಂದ ಪ್ರತಿ ವರ್ಷ ಏನೂ ಬದಲಾವಣೆ ಇರದಿದ್ದರೆ ಮೂರು ವರ್ಷಗಳಿಗೊಮ್ಮೆ ತಯಾರಿಸಬೇಕು.

ಪ್ರಾಥಮಿಕ ಸಹಕಾರಿ ಸಂಘಗಳು ರೈತರಿಂದ ಅಸಲು ಹಾಗೂ ಬಡ್ಡಿಯನ್ನು ವಸೂಲಿ ಮಾಡಿ ಜಿಲ್ಲಾ ಕೇಂದ್ರೀಯ ಬ್ಯಾಂಕುಗಳ ಸಾಲಕ್ಕೆ ಕಟ್ಟಿದಾಗ ಜಿಲ್ಲಾ ಕೇಂದ್ರೀಯ ಬ್ಯಾಂಕು ಆ ಹಣವನ್ನು ಕೇವಲ ತನಗೆ ಬರಬೇಕಾದ ಬಡ್ಡಿಗಾಗಿ ಹಿಡಿಯದೇ ಅದನ್ನು ಅನುಕ್ರಮವಾಗಿ ಅಸಲು ಹಾಗೂ ಬಡ್ಡಿಯಾಗಿ ಜಮಾ ಹಿಡಿಯಬೇಕು.

ಮೇಲಿನ ಸಂಸ್ಥೆಗಳು ಕೆಳಗಿನ ಸಂಸ್ಥೆಗಳ ಅಭಿವೃದ್ಧಿಯ ದೃಷ್ಟಿಯಿಂದ ಮಾರ್ಗಸೂಚಿಗಳನ್ನು ಹೊರಡಿಸುವ ಅಧಿಕಾರ ಹೊಂದಿರಬೇಕು. ಪ್ರಾಥಮಿಕ ಸಂಸ್ಥೆಗಳು ಅವುಗಳನ್ನು ಅನುಸರಿಸುವುದು ಅವುಗಳ ಕರ್ತವ್ಯ.

### ಜಿಲ್ಲಾ ಮಧ್ಯವರ್ತಿ ಹಾಗೂ ರಾಜ್ಯ ಸಹಕಾರಿ ಬ್ಯಾಂಕುಗಳ ಬಗ್ಗೆ

ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಿಂದ ಪ್ರಾಥಮಿಕ ಸಂಘಗಳು ತರುವ ಸಾಲಕ್ಕೆ ಸಾಲ ಹಾಗೂ ಷೇರು ಬಂಡವಾಳದ ಸಂಯೋಜನೆ ಶೇ. ೫ ರಷ್ಟು ಮಾತ್ರ ಆಗಿರಬೇಕು. ಆದರೆ ನಗದು ಸಾಲಗಳಿಗೆ ಈಗಿದ್ದ ಮಿತಿಯನ್ನು ಶೇ. ೨.೫ ರಿಂದ ಶೇ. ೧ಕ್ಕೆ ತಗ್ಗಿಸಬೇಕು.

ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಮೇಲಿಂದ ಮೇಲೆ ಪ್ರಾಥಮಿಕ ಸಹಕಾರಿ ಸಂಘಗಳೊಡನೆ ಭೇಟಿ ನಡೆಸಿ, ಪರಸ್ಪರ ಸಮಸ್ಯೆಗಳ ಪರಿಹಾರಕ್ಕೆ ಹಾಗೂ ಅಭಿವೃದ್ಧಿ ಕಾರ್ಯ

ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ವಿಚಾರ ವಿನಿಮಯ ಮಾಡಬೇಕು.

ರಾಜ್ಯ ಸರಕಾರಗಳು ಪ್ರಾಥಮಿಕ ಸಹಕಾರಿ ಸಂಘಗಳಿಂದ ಆಡಿಟ್ ಶುಲ್ಕವನ್ನು ಪಡೆಯಬಾರದು.

ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಅವು ಪಡೆದ ಠೇವಣಿಯಲ್ಲಿ ಶೇ. ೨೦ಕ್ಕೆ ಹೆಚ್ಚಿರದಷ್ಟು ಹಣವನ್ನು ಸದಸ್ಯೇತರಿಗೆ ಸಾಲವಾಗಿ ಒದಗಿಸಬಹುದು. ಆದರೆ ಅವರನ್ನು ನಾಮ ಮಾತ್ರ ಅಥವಾ ಸಹ ಸದಸ್ಯರೆಂದು ಮಾಡಿಕೊಳ್ಳಬೇಕು. ಅವರಿಗೆ ಮತ ಚಲಾಯಿಸಲು ಅಧಿಕಾರ ಇರಬಾರದು.

ರಾಜ್ಯ ಸಹಕಾರಿ ಬ್ಯಾಂಕು ಸ್ವಸಾಮರ್ಥ್ಯವನ್ನು ಹೊಂದದ ಬ್ಯಾಂಕುಗಳನ್ನು ಬಲಪಡಿಸಲು ಒಂದು ನಿರ್ದಿಷ್ಟ ಕಾಲಮಿತಿಯ ಯೋಜನೆಯನ್ನು ಹಾಕಿಕೊಂಡು ಅವುಗಳನ್ನು ಬಲಪಡಿಸುವ ಕಾರ್ಯಕ್ರಮ ಕೈಗೊಳ್ಳಬೇಕು.

ರಾಜ್ಯ ಸಹಕಾರಿ ಬ್ಯಾಂಕು ತನ್ನ ಹಾಗೂ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳ ಹಿತದೃಷ್ಟಿಯಿಂದ ಹಣಕಾಸಿನ ವಿನಿಯೋಗದ ವ್ಯವಸ್ಥೆಯಲ್ಲಿ ಪರಿಣತಿಯನ್ನು ಹೊಂದಬೇಕು.

**ದೀರ್ಘಾವಧಿ ಸಾಲದ ಸಂಸ್ಥೆಗಳ ಬಗ್ಗೆ**

ಅಲ್ಪಾವಧಿ ಹಾಗೂ ಮಧ್ಯಮಾವಧಿ ಬೇಸಾಯ ಸಾಲ ಹಂಚುವ ಸಹಕಾರಿ ಪತ್ತಿನ ಸಂಸ್ಥೆಗಳ ಕಾರ್ಯ ಕಲಾಪಗಳಲ್ಲಿ ಸಮನ್ವಯ ಹಾಗೂ ಸಹಕಾರ ಮೂಡಬೇಕು.

ಸಾಂಸ್ಥಿಕ ಬಲವರ್ಧನೆಯ ಯೋಜನೆಗಳಿಗೆ ಒಳಪಟ್ಟ ಪ್ರಾಥಮಿಕ ಹಾಗೂ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ರಾಜ್ಯ ಸರಕಾರ ಷೇರು ಬಂಡವಾಳವನ್ನು ಒದಗಿಸಬೇಕು. ನಬಾರ್ಡ್ ರಾಜ್ಯ ಸರಕಾರಗಳಿಗೆ ಷೇರು ಬಂಡವಾಳದ ಸಲ ಒದಗಿಸುವ ಬಗ್ಗೆ ಇದ್ದ ಕಟ್ಟಳೆಗಳಲ್ಲಿ ಸಡಿಲಿಕೆ ತೋರಿಸಬೇಕು.

ಸಾರ್ವಜನಿಕ ವಲಯದ ಬ್ಯಾಂಕು ಹಾಗೂ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟುಗಳಿಗೆ ದೊರೆಯುವಂತೆ, ಈ ಬ್ಯಾಂಕುಗಳು ಜನರಿಂದ ಪಡೆಯುವ ದೀರ್ಘಾವಧಿ ಸಾಲಗಳ ಮೇಲಿನ ಸುಂಕದಲ್ಲಿ ರಿಯಾಯಿತಿ ದೊರೆಯಬೇಕು.

ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ತಮ್ಮ ಸಾಲದ ನೀತಿಯಲ್ಲಿ ವೈವಿಧ್ಯವನ್ನು ಹೊಂದಿ ಒಣ ಬೇಸಾಯ, ಗೃಹ ನಿರ್ಮಾಣ ಮುಂತಾದವುಗಳಿಗೆ ಸಾಲ ಹಂಚಬೇಕು.

ನಬಾರ್ಡ್ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ಮಧ್ಯಂತರ ಸಾಲ ಒದಗಿಸಬೇಕು.

**ಇತರ ಶಿಫಾರಸುಗಳು**

ಸಹಕಾರಿ ಸಂಘಗಳ ನಿಬಂಧಕರಿಗಿದ್ದ ಕೆಲವೊಂದು ಅಧಿಕಾರಗಳನ್ನು ಮೇಲ್ಮಟ್ಟದ ಸಹಕಾರಿ ಸಂಘಗಳು ಕೆಳಮಟ್ಟದ ಸಹಕಾರಿ ಸಂಘಗಳ ಬಗ್ಗೆ ಹೊಂದಬೇಕು.

ಮೇಲ್ಮಟ್ಟದ ಸಹಕಾರಿ ಸಂಘಗಳು ಅವಶ್ಯಕವೆಂದು ಕಂಡುಬಂದರೆ ಕೆಳಮಟ್ಟದ ಸಹಕಾರಿ ಸಂಘಗಳ ಮಹಾಸಭೆಯನ್ನು ಕರೆಯಬಹುದು.

ಕೆಳಗಿನ ಕೋಷ್ಟಕದಿಂದ ತಿಳಿಯುವುದೇನೆಂದರೆ, ೧೯೯೯-೨೦೦೦ನೇ ಇಸವಿಯಲ್ಲಿ ಕೃಷಿ ಹಾಗೂ ಕೃಷಿ ಪೋಷಿತ ಚಟುವಟಿಕೆಗಳಿಗಾಗಿ ಗ್ರಾಮೀಣ ಸಾಲದ ಬೇಡಿಕೆಯು ಒಟ್ಟು ೧೧೦೮೭೩ ಕೋಟಿ ರೂ. ಗಳಿಗೆ ಮುಟ್ಟಬಹುದೆಂದು ಈ ಸಮಿತಿ ಅಂದಾಜು ಮಾಡಿದ್ದು ಈ ಬೇಡಿಕೆಯಲ್ಲಿ ಸಹಕಾರಿ ಸಂಸ್ಥೆಗಳು ಹಾಗೂ ವಾಣಿಜ್ಯ ಬ್ಯಾಂಕುಗಳು ಕೂಡಿ, ಒಟ್ಟು ೮೯೪೪೪ ಕೋಟಿ ರೂಗಳಷ್ಟು ಸಾಲ ಒದಗಿಸಬಹುದೆಂದೂ ಅಭಿಪ್ರಾಯಪಟ್ಟಿದೆ. ಅಂದರೆ ಈ ಅವಧಿಯಲ್ಲಿ ಒಟ್ಟು ೨೧೪೨೯ ಕೋಟಿ ರೂಪಾಯಿಗಳ ಕೊರತೆ ಆಗಬಹುದೆಂದು ಈ ಸಮಿತಿ ಅಂದಾಜು ಮಾಡಿದೆ. ಇದರಿಂದ ವಾಣಿಜ್ಯ ಹಾಗೂ ಸಹಕಾರಿ ಸಂಘಗಳು ತಮ್ಮ ದುಡಿಯುವ ಬಂಡವಾಳವನ್ನು ಹೆಚ್ಚಿಸಿಕೊಳ್ಳಬೇಕಾದ ಜವಾಬ್ದಾರಿಯು ತಿಳಿದು ಬರುತ್ತದೆ. ಆದ್ದರಿಂದ ಸಹಕಾರಿ ಸಂಘಗಳು ಹಾಗೂ ಬ್ಯಾಂಕುಗಳು ಠೇವಣಿ ಸಂಗ್ರಹಣೆಯಲ್ಲಿ ಇನ್ನೂ ಅತಿ ಹೆಚ್ಚಿನ ಪಾತ್ರ ವಹಿಸಬೇಕಾಗಿದೆ.

**ಕೋಷ್ಟಕ -೪**

ಕೃಷಿ ಹಾಗೂ ಕೃಷಿ ಪೋಷಿತ ಉದ್ದಿಮೆಗಳಿಗೆ ಬೇಕಾದ ಸಾಲ ಹಾಗೂ ದೊರೆಯಬಹುದಾದ ಸಾಲ

ಕೋಟಿ ರೂ.ಗಳಲ್ಲಿ

| ವಿವರ | ೧೯೮೯-೯೦ | ೧೯೯೪-೯೫ | ೧೯೯೯-೨೦೦೦ |
|---|---|---|---|
| ಸಾಲದ ಬೇಡಿಕೆ ೧೯೮೪-೮೫ ಧಾರಣೆಗಳ ಮೇರೆಗೆ | ೨೧೫೮೭ | ೩೫೧೮೭ | ೫೩೩೩೨ |
| ಪ್ರತಿ ವರ್ಷ ಸಾಮಗ್ರಿಗಳಿಗೆ ಶೇ. ೫ ರಷ್ಟು ಧಾರಣೆ ಹೆಚ್ಚುವರಿ ಪ್ರಮಾಣದ ಮೇರೆಗೆ | ೨೭೫೫೧ | ೫೭೩೧೬ | ೧೧೦೮೭೩ |
| ದೊರೆಯಬಹುದಾದ ಸಂಪನ್ಮೂಲಗಳು ವಾಣಿಜ್ಯ ಬ್ಯಾಂಕುಗಳು | ೧೯೯೪೮ | ೩೪೨೩೭ | ೫೭೦೩೩ |
| ಸಹಕಾರಿ ಬ್ಯಾಂಕುಗಳು | ೮೭೪೬ | ೧೭೫೯೨ | ೩೨೪೧೧ |
| ಒಟ್ಟು | ೨೮೬೯೪ | ೫೧೮೨೯ | ೮೯೪೪೪ |
| ಹೆಚ್ಚುವರಿ (+) ಕೊರತೆ (-) | + ೧೧೪೩ | -೫೪೮೭ | -೨೧೪೨೯ |

### ಸೀಸರನ ಹೆಂಡತಿ

ಸೀಸರನ ಹೆಂಡತಿ ಅಪವಾದಾತೀತ ಎಂಬ ಮಾತೊಂದುಂಟು. ರೋಮಿನ ಅಧಿಪತಿಯಾಗಿದ್ದ ಸೀಸರನಂಥ ಮಹಾವೀರನ ಹೆಂಡತಿಯನ್ನು ಕೆಣಕುವ ಎದೆಗಾರಿಕೆ ಯಾರಿಗೆ ಇದ್ದೀತು? ಆದ್ದರಿಂದ ಆಕೆಯ ಶೀಲವನ್ನು ಯಾರೂ ಪ್ರಶ್ನಿಸುವಂತಿಲ್ಲ. ಪ್ರಶ್ನಿಸಬಾರದು.

ನಮ್ಮ ರಾಷ್ಟ್ರೀಕೃತ ಬ್ಯಾಂಕುಗಳೂ ಸೀಸರನ ಪತ್ನಿಯಂತೆ. ಇವು ಹಣ ಹಂಚುವ ಅಕ್ಷಯ ಪಾತ್ರೆಗಳು. ಪ್ರಭುತ್ವದ ಬೆಳ್ಗೊಡೆಯ ಅಡಿಯಲ್ಲಿ ಹಬ್ಬಿದ ಈ ಸಂಸ್ಥೆಗಳ ಅಭದ್ರತೆಗೆ ಕಾರಣವಾದರೂ ಎಲ್ಲಿ? ಪೈಪೋಟಿಯಿಂದ ಠೇವಣಿ ಸಂಗ್ರಹಿಸುವುದು ಇವಕ್ಕೆ ಅನಿವಾರ್ಯವೆನಿಸಿದರೂ, ಇವು ಸರ್ಕಾರದ ಒಡೆತನಕ್ಕೆ ಒಳಪಟ್ಟಿದ್ದರಿಂದ ಈ ಹಣದ ವಿತರಣೆಯ ರೀತಿನೀತಿ ನಿರ್ಧರಿಸುವ ಅಧಿಕಾರ ಹಾಗೂ ಹೊಣೆ ಸರ್ಕಾರದ್ದು. ಅದರ ಅಭಿಕರ್ತೃವಾಗಿ ಕಾರ್ಯ ನಿರ್ವಹಿಸುವ ರಿಸರ್ವ್ ಬ್ಯಾಂಕಿನದು. ಸರ್ವಜನಹಿತಕ್ಕಾಗಿ, ಸರ್ವ ಜನ ಸುಖಕ್ಕಾಗಿ ಶ್ರಮಿಸುವ ಸರ್ಕಾರವಾಗಲಿ, ರಿಸರ್ವ್ ಬ್ಯಾಂಕಾಗಲಿ ಎಡಹುವುದು ಸಾಧ್ಯವುಂಟೆ?

### ಗುಪ್ತವ್ಯಾಧಿ

ದೊರೆ ಎಂದೂ ತಪ್ಪು ಮಾಡಲಾರ ಎಂಬುದು ಇಂಗ್ಲೆಂಡಿನಲ್ಲೊಂದು ಜನಪ್ರಿಯ ಸಾಮತಿ. ಅಂತೆಯೇ ಪ್ರಜಾಪ್ರಭುತ್ವ ವ್ಯವಸ್ಥೆಯೂ ತಪ್ಪು ಮಾಡಬಾರದೆಂಬುದು ಆಶಯ. ಆದರೆ ಪಕ್ಷಾಧಾರಿತ ಪ್ರಜಾಪ್ರಭುತ್ವದಲ್ಲಿ ಪ್ರತಿಯೊಂದು ಪಕ್ಷವೂ ತನ್ನ ಮತದಾರರ ಒಲುಮೆಯನ್ನು ಸಂಪಾದಿಸಿಕೊಳ್ಳುವುದೂ ಅದನ್ನು ರಕ್ಷಿಸಿಕೊಳ್ಳುವುದೂ ಅತ್ಯಗತ್ಯ. ಇದಕ್ಕಾಗಿ ಅದು ಹೊಸ ಹೊಸ ಹಾಗೂ ಆಕರ್ಷಕ ಜನಪ್ರಿಯ ಕಾರ್ಯಕ್ರಮಗಳನ್ನು ಕೈಗೊಳ್ಳುವುದಾಗಿ ವಾಗ್ದಾನ ಮಾಡುವುದೂ, ಅಧಿಕಾರ ಪಡೆದಾಗ ಅವನ್ನು ಜಾರಿಗೆ ತರುವುದೂ ಸಾಮಾನ್ಯ. ಈ ರಾಜಕೀಯ ಪಕ್ಷಗಳ ಉದ್ದೇಶವನ್ನು ಯಾರೂ ಪ್ರಶ್ನಿಸಲಾರರಾದರೂ ಆ ಕಾರ್ಯಕ್ರಮಗಳನ್ನು ಸಮಾರಾಧನೆಯ ರೂಪದಲ್ಲಿ ಆಚರಣೆಗೆ ತಂದಾಗ ಸಂಪನ್ಮೂಲಗಳು ಪೋಲಾಗುವುದೂ ಅವಕ್ಕೆ ಯಾದೃಚ್ಛಿಕತೆಯ ದೋಷ ಅಂಟಿಕೊಳ್ಳುವುದೂ ಸಹಜ. ಸಾರ್ವಜನಿಕ ಹಣದ ಅಪವ್ಯಯವಾಗುವ ಸಂಭವವೂ ಉಂಟು. ಉಳಿತಾಯದಾರರಿಂದ ಸಂಗ್ರಹವಾದ ಸಂಪನ್ಮೂಲವನ್ನು ವಿನಿಯೋಜನೆಯ ಮಾರ್ಗಗಳಲ್ಲಿ ಹರಿಯಿಸಿ ಆರ್ಥಿಕಾಭ್ಯುದಯ ಹಾಗೂ ಉದ್ಯೋಗ ಸೃಷ್ಟಿಗೆ ನೆರವಾಗಿ, ಆ ಸಂಪನ್ಮೂಲ ಮತ್ತೆ ವ್ಯವಸ್ಥೆಯೊಳಕ್ಕೆ ಹರಿದುಬಂದು ಪುನರ್ವಿನಿಯೋಜನೆಗೆ ಒದಗಿ ಬರುವಂತೆ ಮಾಡುವ ಬ್ಯಾಂಕಿಂಗ್ ಕಾರ್ಯಚಕ್ರಕ್ಕೆ ಇದರಿಂದ ಭಂಗ ಉಂಟಾಗುವ ಅಪಾಯವುಂಟು. ರಾಜಕಾರಣದ ಕೈ ಮೇಲಾದಾಗ, ಅರ್ಥ ವ್ಯವಸ್ಥೆಯ ಸಮಗ್ರ ಚಿತ್ರ ಕಣ್ಮರೆಯಾದಾಗ ಹೀಗಾಗುವದು ಸಹಜ. ಅಂತಿಮವಾಗಿ ಬ್ಯಾಂಕುಗಳೇ ದುರ್ಬಲಗೊಳ್ಳಬಹುದು. ಅವುಗಳ ಲಾಭಪ್ರದತೆಗೆ ಊನ ಉಂಟಾಗಬಹುದು. ಇತರ ಉದ್ಯಮಗಳ ಅಸ್ವಸ್ಥತೆಯನ್ನು ಚಿಕಿತ್ಸೆಯ ಮೂಲಕ ಹೋಗಲಾಡಿಸಬೇಕಾದ ಬ್ಯಾಂಕುಗಳೇ ಅಸ್ವಸ್ಥವಾಗಬಹುದು. ವೈದ್ಯರಿಗೇ ವ್ಯಾಧಿ ತಗುಲಿದಂತಾಗಬಹುದು. ಎಲ್ಲವೂ ಸರಿಯಾಗಿದೆಯೆಂಬ ಚಿತ್ರವನ್ನೇ ಕೊಡುತ್ತಾ ಬಂದು, ಕೊನೆಗೆ ಹಠಾತ್ತನೆ ವ್ಯಾಧಿ ಉಲ್ಬಣಗೊಂಡಾಗ ಅವು ಕುಸಿಯುವಂತಾಗಬಹುದು. ಎಲ್ಲವೂ ಚೆನ್ನಾಗಿದೆಯೆಂಬ ಅವಗುಂಠನವನ್ನು ಸರಿಸಿ ನೋಡಿದರೆ ಒಳಗಿನ ವ್ಯಾಧಿ ಗೊತ್ತಾದೀತು. ಅದನ್ನು ಸರಿಸಲೇಬೇಕಾದ ಕಾಲವೂ ಬಂದೀತು.

ಬ್ಯಾಂಕಿಂಗ್ ಪ್ರಪಂಚದ ಪ್ರಸಕ್ತ ಸಂಚಿಕೆಯಲ್ಲಿ ಪ್ರಕಟವಾಗಿರುವ ಕೆಲವು ಲೇಖನಗಳು ಈ ಕ್ಷೇತ್ರದಲ್ಲಿ ಹಬ್ಬುತ್ತಿರುವ ವ್ಯಾಧಿಯತ್ತ ನಮ್ಮ ಗಮನ ಸೆಳೆಯುತ್ತವೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ರಾಜಕೀಯ ಹಸ್ತಕ್ಷೇಪ, ಕೃಷಿ ಹಾಗೂ ಗ್ರಾಮೀಣ ಋಣ ಪರಿಹಾರ ಯೋಜನೆ, ಭಿನ್ನಕ ಬಡ್ಡಿ ದರ, ಬ್ಯಾಂಕ್ ವಿಲೀನ– ಈ ಲೇಖನಗಳು ಬ್ಯಾಂಕಿಂಗ್ ವಲಯದಲ್ಲಿ ಹಬ್ಬುತ್ತಿರುವ ವ್ಯಾಧಿಗಳ ಸ್ವರೂಪವನ್ನು ವಿವರಿಸುತ್ತವೆ. ಇವನ್ನು ನಿವಾರಿಸದಿದ್ದರೆ ಮುಂದೆ ಅಪಾಯ ಕಾದಿಟ್ಟದ್ದೆಂಬುದನ್ನು ಮನವರಿಕೆ ಮಾಡಿಕೊಡುತ್ತವೆ.

### ರಾಷ್ಟ್ರೀಕರಣಾನಂತರ

ಭಾರತದಂಥ ಹಿಂದುಳಿದ ದೇಶದ ಆರ್ಥಿಕ ಸಾಮಾಜಿಕ ಅಭ್ಯುದಯವನ್ನು ಸಾಧಿಸಲು ಬ್ಯಾಂಕ್ ರಾಷ್ಟ್ರೀಕರಣ ಒಂದು ಮಹಾ ಉಪಾಯ ಎಂದು ನಂಬಿದ್ದ ಕಾಲವೊಂದಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಜಾಲವನ್ನು ಹಬ್ಬಿಸಲೂ ಆರ್ಥಿಕವಾಗಿ ದುರ್ಬಲರಾಗಿರುವವರಿಗೂ ಸಾಮಾಜಿಕವಾಗಿ ಹಿಂದುಳಿದವರಿಗೂ ಅಗತ್ಯವಾದ ಹಣ ಪೂರೈಸಲು ಇದು ಅನುವಾಗಿ ಒದಗಿ ಬಂತು ಎಂಬುದು ನಿಜ. ಹಳೆಯ ಇಂಪೀರಿಯಲ್ ಬ್ಯಾಂಕನ್ನು ಭಾರತೀಯ ಸ್ಟೇಟ್ ಬ್ಯಾಂಕಾಗಿ ಪರಿವರ್ತಿಸಿ, ಹಲವಾರು ರಾಜ್ಯ ಬ್ಯಾಂಕುಗಳನ್ನು ಇದರ ತೆಕ್ಕೆಗೆ ಒಳಪಡಿಸಿ, ಗ್ರಾಮ ಪ್ರದೇಶದಲ್ಲಿ ಇವು ಶಾಖೆಗಳನ್ನು ತೆರೆಯುವ ಕ್ರಮ ಕೈಗೊಳ್ಳುವಂತೆ ಮಾಡಿದ್ದು ಮೊದಲ ಹೆಜ್ಜೆ. ಹದಿನಾಲ್ಕು ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿದ್ದು ಎರಡನೆಯ ಹೆಜ್ಜೆ. ಮತ್ತೆ ಹನ್ನೊಂದು ವರ್ಷಗಳ ಅನಂತರ ಇನ್ನೂ ಆರು ಬ್ಯಾಂಕುಗಳನ್ನು ಸರ್ಕಾರದ ಒಡೆತನಕ್ಕೆ ತಂದದ್ದು ಮೂರನೆಯದು. ತ್ರಿವಿಕ್ರಮನ ಮೂರು ಪಾದಗಳಂತೆ ಇವುಗಳ ಶಾಖೆಗಳು ಇಂದು ಪಟ್ಟಣ, ಅರೆಪಟ್ಟಣ ಹಾಗೂ ಗ್ರಾಮಗಳಲ್ಲಿ ತುಂಬಿ ಹೋಗಿವೆ. ಇವುಗಳ ಜೊತೆಗೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೂ ತಮ್ಮ ಅಳಿಲ ಸೇವೆ ಮಾಡುತ್ತಿವೆ. ಇವು ವಾಣಿಜ್ಯ ಬ್ಯಾಂಕುಗಳ ಕೃಪಾಪೋಷಿತ ಸಂಸ್ಥೆಗಳು. ಹೀಗೆಲ್ಲಾ ಆಗಿದ್ದೂ ಕೆಲವು ಪ್ರದೇಶಗಳಲ್ಲಿ ಸಾಕಷ್ಟು ಬ್ಯಾಂಕಿಂಗ್ ಕಛೇರಿಗಳಿಲ್ಲವೆಂಬುದು ನಿಜ. ಆದರೆ ಇನ್ನು ಕೆಲವು ಕಡೆಗಳಲ್ಲಿ ಇವು ಕಿಕ್ಕಿರಿದು ತುಂಬಿವೆ. ಆರಂಭದ ಆತುರದಲ್ಲಿ ಹೀಗೆಲ್ಲಾ ಆಗುವುದು ಸಹಜವೇ. ಗುರಿ ತಲುಪಿದೆವೆಂದು ತೋರಿಸುವ

ಆತುರದಲ್ಲಿ ಆದ ಅತಿವ್ಯಾಪ್ತಿ ಹಾಗೂ ಅವ್ಯಾಪ್ತಿಯ ದೋಷಗಳು ಇವು.

ಅಂತೂ ಈ ಎರಡು ದಶಕಗಳಿಗೂ ಹೆಚ್ಚಿನ ಕಾಲದಲ್ಲಿ ಬ್ಯಾಂಕಿಂಗಿನ ಬೆಳವಣಿಗೆ ಅಗಾಧವೆಂಬುದರಲ್ಲಿ ಸಂದೇಹವಿಲ್ಲ. ಶಾಖೆಗಳ ಸಂಖ್ಯೆಯ ಜೊತೆಗೆ ವಹಿವಾಟಿನ ಗಾತ್ರವೂ ಬೆಳೆದಿದೆ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಬ್ಯಾಂಕ್ ಠೇವಣಿಗಳ ಮೊತ್ತ ನಮ್ಮ ಸ್ಥೂಲ ದೇಶೀಯ ಉತ್ಪನ್ನದ ಶೇ. ೧೪.೫ರಷ್ಟು ಇತ್ತು. ಇಪ್ಪತ್ತು ವರ್ಷಗಳಲ್ಲಿ ಇದು ಶೇ. ೩೮ಕ್ಕೆ ಏರಿತು. ಹಣಕಾಸು ಆಸ್ತಿಗಳ ಪ್ರಮಾಣ ಈಗ ನಮ್ಮ ಸ್ಥೂಲ ದೇಶೀಯ ಉತ್ಪನ್ನದ ಸರಿಸುಮಾರು ಶೇ. ೪೫ರಷ್ಟಿದೆ. ಇಂಥ ಪರಗತಿ ಯಾವ ದೇಶದಲ್ಲೂ ಆಗಿಲ್ಲ. ಇದು ಹೆಮ್ಮೆಪಡಬೇಕಾದ್ದೆ.

ಆದರೆ ನಮ್ಮ ಬ್ಯಾಂಕ್ ಠೇವಣಿಗಳ ಶೇ. ೫೩ಕ್ಕೂ ಹೆಚ್ಚು ಭಾಗ ಆದಾಯ ಸಂಪಾದಿಸದಾಸ್ತಿಗಳಲ್ಲಿ ಬಂಧಿತವಾಗಿದೆ. ಹೇಗೆಂಬ ಪ್ರಶ್ನೆಗೆ ಉತ್ತರ ಸುಲಭ. ಶೇ. ೧೫ ರಷ್ಟನ್ನು ನಗದು ಮೀಸಲಾಗಿ ಇಡಬೇಕೆಂಬುದು ಶಾಸನದ ಆದೇಶ. ಇನ್ನು ಶೇ. ೩೮.೫ ರಷ್ಟನ್ನು ಸರ್ಕಾರಿ ಸಾಲ ಪತ್ರಗಳೇ ಮುಂತಾದವುಗಳಲ್ಲಿ ತೊಡಗಿಸಬೇಕೆಂಬುದು ಕಡ್ಡಾಯ. ಹೀಗೆ ನಗದು ಮೀಸಲು ಅನುಪಾತ ಮತ್ತು ಪರಿನಿಯತ ದ್ರವತ್ವ ಅನುಪಾತ ತೆಗೆದಿಟ್ಟ ಮೇಲೆ ೫೩.೫ ಉಳಿಯುವುದು ಶೇ. ೪೬.೫ ರಷ್ಟು ಬ್ಯಾಂಕುಗಳ ದ್ರವತ್ವ ಕಾಪಾಡಲೂ, ಅವುಗಳಲ್ಲಿ ಜನತೆಯ ವಿಶ್ವಾಸ ಉಳಿಯುವಂತೆ ಮಾಡಲೂ, ಹೆಚ್ಚು ಹಣ ಅರ್ಥ ವ್ಯವಸ್ಥೆಯಲ್ಲಿ ಹರಿದು ಬಲೆಗಳ ಮೇಲೆ ಒತ್ತಡ ಹೇರದಂತೆ ಎಚ್ಚರ ವಹಿಸಲು, ಸಂಪನ್ಮೂಲಗಳು ನಿಶ್ಚಿತ ಉಪಯುಕ್ತ ನಿಟ್ಟುಗಳಲ್ಲಿ ಹರಿಯುವಂತೆ ಮಾಡಲೂ, ಯೋಜಿತವಾದ ರೀತಿಯಲ್ಲಿ ಅರ್ಥ ವ್ಯವಸ್ಥೆ ವಿಕಾಸ ಹೊಂದುವಂತೆ ನಿರ್ದೇಶಿಸಲೂ ಇಂಥ ಕ್ರಮಗಳೆಲ್ಲ ಅಗತ್ಯ ಎಂಬ ವಾದದಲ್ಲಿ ಹುರುಳಿಲ್ಲದೆ ಇಲ್ಲ. ಆದರೆ ತಮ್ಮ ಮಗ ಮುಂದೆ ಬರಬೇಕೆಂಬ ಅತ್ಯಾಕಾಂಕ್ಷೆಯಿಂದ ಅವನನ್ನು ಅತಿಯಾಗಿ ದಂಡಿಸುವ ತಂದೆತಾಯಂದಿರು ಅಂತಿಮವಾಗಿ ಅವನ ಅಭ್ಯುದಯಕ್ಕೇ ತಡೆ ಒಡ್ಡುವುದು ಸಾಮಾನ್ಯ. ಇಲ್ಲಿಯೂ ಹಾಗಾಗುವ ಸಂಭವವನ್ನು ತಳ್ಳಿಹಾಕುವಂತಿಲ್ಲ. ಕೃತಕ ವ್ಯವಸ್ಥೆಯಿಂದಾಗಿ ಉದರಯ ಹರಿವಿಗೆ ತಡೆ ಉಂಟಾಗಿದೆ. ಬೇಡಿಕೆ ಪೂರೈಕೆಯ ಸಹ ಬಲಗಳ ಪ್ರವರ್ತನೆಗೆ ಅಡ್ಡಿಯಾಗಿದೆ. ಕೃತಕವಾದ ಬಡ್ಡಿ ದರ ವಿನ್ಯಾಸ ಅನೇಕ ಸಂದಿಗ್ಧಗಳನ್ನು ತಂದೊಡ್ಡಿದೆ. ಬ್ಯಾಂಕ್ ವ್ಯವಹಾರದ ವೆಚ್ಚ ಅತಿಯಾಗಿದೆ. ಲಾಭಪ್ರದತೆ ಕುಗ್ಗುತ್ತಿದೆ. ನಿಷೇಧಾತ್ಮಕಾಗುತ್ತಿದೆ.

ವಿಧಿಬದ್ಧ ಮೀಸಲುಗಳಲ್ಲಿ ತೊಡಗಿಸಿದ ಮೇಲೆ ಉಳಿಯುವ ಠೇವಣಿ ಹಣವನ್ನಾದರೂ ಲಾಭಪ್ರದವಾಗಿ ವಿನಿಯೋಜಿಸುವುದು ಬ್ಯಾಂಕುಗಳಿಗೆ ಸಾಧ್ಯವಿಲ್ಲ. ಅವು ನೀಡುವ ಒಟ್ಟು ಉದರಿಯಲ್ಲಿ ಕನಿಷ್ಠ ಶೇ. ೪೦ ರಷ್ಟು ಆದ್ಯತಾ ವಲಯಕ್ಕೆ ಸಲ್ಲಬೇಕು. ಇದರಿಂದಲು ಬ್ಯಾಂಕು ಹೆಚ್ಚಿನ ಲಾಭ ನಿರೀಕ್ಷಿಸುವಂತಿಲ್ಲ. ಹಿಂದೆ ಹೇಳಿದ ಹಾಗೆ ಬ್ಯಾಂಕು ಠೇವಣಿಗಳ ಮೇಲೆ ನೀಡುವ ಬಡ್ಡಿ, ಅದು ನೀಡಿದ ಸಾಲದ ಮೇಲೆ ಪಡೆಯಬಹುದಾದ ಬಡ್ಡಿ ಎಲ್ಲವೂ ನಿಗದಿಯಾಗಿರುವುದರಿಂದ, ನೀಡಿದ ಸಾಲದಲ್ಲಿ ಗಮನಾರ್ಹ ಭಾಗ ರಿಯಾಯಿತಿ ದರದಲ್ಲಿ ಹೋಗಬೇಕಾದ್ದರಿಂದ ಅದರ ಕಾರ್ಯ ನಿರ್ವಹಣೆಗೆ ಇರುವ ಅವಕಾಶ ಬಲು ಕಿರಿದು. ಬ್ಯಾಂಕು ಅನೇಕ ಕೈಗಾರಿಕೆಗಳಿಗೆ ನೀಡಿದ ಸಾಲವೂ ಹಿಂದಕ್ಕೆ ಬರುವ ಸ್ಥಿತಿಯಲ್ಲಿರುವುದಿಲ್ಲ. ಅಸ್ವಸ್ಥ ಕೈಗಾರಿಕೆಗಳಿಗೆ ಬದುಕಿ ಉಳಿಯುವ ಹಕ್ಕುಂಟು. ಇದೊಂದು ಮೂಲಭೂತ ಹಕ್ಕು ಎಂದೇ ಹೇಳಬಹುದು. ಆದರೆ ಇದಕ್ಕಾಗಿ ಸತತವಾಗಿ ನೀಡಬೇಕಾದ ಪ್ರಾಣವಾಯುವಿಗೂ ಒಂದು ಮಿತಿ ಉಂಟಲ್ಲವೆ? ಕೈಗಾರಿಕಾ ಅಸ್ವಸ್ಥತೆ ಹಾಗೂ ಆದ್ಯತಾ ವಲಯಕ್ಕೆ ನೀಡಿದ ಮುಂಗಡಗಳು ಜಿಗಟಾಗಿ ಪರಿಣಮಿಸಿ, ಕಿಲುಬುಗಟ್ಟಿ, ಬ್ಯಾಂಕುಗಳ ಆರ್ಥಿಕ ತಳವನ್ನು ತಿಂದುಹಾಕುತ್ತಿವೆ. ಸುಮಾರು ನಾಲ್ಕು ಲಕ್ಷ ಅಸ್ವಸ್ಥ ಹಾಗೂ ದುರ್ಬಲ ಕೈಗಾರಿಕಾ ಘಟಕಗಳಲ್ಲಿ ಸಿಲುಕಿಕೊಂಡಿರುವ ಹಣ ರೂ. ೧೦೦೦೦ ಕೋಟಿಗೂ ಹೆಚ್ಚು ಎಂಬುದು ಒಂದು ಅಂದಾಜು. ಇದು ವಾಣಿಜ್ಯ ಬ್ಯಾಂಕುಗಳ ಒಟ್ಟು ಮುಂಗಡಗಳ ಶೇ. ೧೦ ರಷ್ಟು.

### ಗೋಪ್ಯಾ ಪದ್ಧತಿ

ನಷ್ಟ ಅನುಭವಿಸುತ್ತಿದ್ದರೂ ಲಾಭದ ಕನಸು ಕಾಣುವುದು ನಮ್ಮ ಬ್ಯಾಂಕುಗಳಲ್ಲಿ ಅನೂಚಾನವಾಗಿ ನಡೆದು ಬಂದಿರುವ ಒಂದು ಪ್ರಕ್ರಿಯೆ. ತೋಟದ ಶೃಂಗಾರದಲ್ಲಿ ಬ್ಯಾಂಕುಗಳು ನಿಷ್ಣಾತವಾಗಿದೆ. ಮೇಲ್ಮೆರಗು ಮಾಡುವುದು (ವಿಂಡೋ ಡ್ರೆಸಿಂಗ್) ಒಂದು ಕಲೆ. ಬ್ಯಾಂಕುಗಳು ತಮ್ಮ ಪುಸ್ತಕಗಳಲ್ಲಿ ಅಗಾಧ ಮೊಬಲಗುಗಳನ್ನು ಈ ರೀತಿಯ ಕ್ರಿಯಾಶೀಲವಲ್ಲದ ಆಸ್ತಿಗಳ ರೂಪದಲ್ಲಿ ತುಂಬಿಕೊಂಡಿದ್ದರೂ ಇವನ್ನೆಲ್ಲ ಲಾಭವನ್ನು ಸಂಪಾದಿಸುವ ಆಸ್ತಿಗಳೆಂದೇ ಲೆಕ್ಕದಲ್ಲಿ ಕಾಣಿಸುತ್ತವೆ. ಬರಬೇಕಾದ ಸಾಲದ ಮೊಬಲಗಿನ ಮೇಲಣ ಬಡ್ಡಿಯನ್ನು ಲೆಕ್ಕ ಹಾಕುತ್ತ ಬಂದು, ವಸೂಲಾಗದ ಬಡ್ಡಿಯನ್ನೂ ಲಾಭವೆಂದು ಪರಿಗಣಿಸುತ್ತವೆ. ಈ ಲಾಭವೆಂಬುದು ಪುಸ್ತಕದ ಬದನೆಕಾಯಿ, ಬರೀ ಆಕಾಶ ಕುಸುಮ. ಅಸಲು ವಸೂಲಾಗುವಂತಾದಾಗ ತಾನೇ ಬಡ್ಡಿಯ ಮಾತು. ಬ್ಯಾಂಕ್ ಮುಂಗಡಗಳನ್ನು ಅವುಗಳ ಆರೋಗ್ಯ ಸ್ಥಿತಿಗೆ ಅನುಗುಣವಾಗಿ ವರ್ಗಗಳಾಗಿ ವಿಂಗಡಿಸಿ ತೋರಿಸಬೇಕೆಂದು ರಿಸರ್ವ್ ಬ್ಯಾಂಕ್ ಆದೇಶಿಸುತ್ತದೆ. ಆದರೆ ಅಸ್ವಸ್ಥ ಘಟಕಗಳ ಬಾಕಿಗಳನ್ನು ತಾತ್ಕಾಲಿಕವಾಗಿ ಅನಿಯತವಾದ ಖಾತೆಗಳು ಎಂಬ ಶೀರ್ಷಿಕೆಯ ಅಡಿಯಲ್ಲಿ ತೋರಿಸುವುದು ಅವುಗಳ ಅಭ್ಯಾಸವಾಗಿದೆ. ಬ್ಯಾಂಕುಗಳು ತಮ್ಮ ಸ್ಥಿತಿ ವಿವರಣ ಪಟ್ಟಿಗಳಲ್ಲಿ ಆಧಾರಕ್ಕೆ ಅನುಗುಣವಾಗಿ ಬ್ಯಾಂಕ್ ಮುಂಗಡಗಳನ್ನು ವಿಂಗಡಿಸುವ ಬದಲು ಸ್ವಾಸ್ಥ್ಯ ಸಂಕೇತ ಸಂಖ್ಯೆಗಳಿಗೆ ಅನುಗುಣವಾಗಿ ವರ್ಗೀಕರಿಸಿ ತೋರಿಸಬೇಕೆ ಎಂಬ ವಿಚಾರ ಈಗ ಚರ್ಚೆಗೆ ಒಳಗಾಗಿದೆ. ಹೀಗೆ ಮಾಡುವುದರಿಂದ ಬ್ಯಾಂಕುಗಳ ವಿಶ್ವಾಸಾರ್ಹತೆಯ ಬಗ್ಗೆ ಸಂದೇಹ ಮೂಡಬಹುದೆಂಬ ಅಂಜಿಕೆ ಅವಕ್ಕೆ. ಬರಬೇಕಾದ ಬಡ್ಡಿಯನ್ನೂ ಆದಾಯವೆಂದು ಪರಿಗಣಿಸಿ, ವಸೂಲಾದ್ದನ್ನು ಮಾತ್ರ

ತೋರಿಸುವದಕ್ಕೂ ಅವುಗಳ ವಿರೋಧ ಇರುವಂತಿದೆ. ಹೀಗೆ ಮಾಡುವುದಾದರೆ, ಮುಂದೆ ವಸೂಲಾಗಬಹುದಾದ ಎಷ್ಟೋ ಬಾಕಿಯನ್ನು ತೊಡೆದುಹಾಕಿದಂತೆ ಆದೀತೆಂದು ಅವಕ್ಕೆ ಭಯ. ಆದರೆ ಬ್ಯಾಂಕುಗಳು ಈಗ ಅನುಸರಿಸುತ್ತಿರುವ ಗೋಷಾ ಪದ್ಧತಿಯನ್ನು ತೊರೆದು, ತಮ್ಮ ಅವಗುಂಠನವನ್ನು ತೆಗೆದು ಹಾಕಿ ಸಾರ್ವಜನಿಕರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವದೂ, ನಿಜಸ್ಥಿತಿಯ ಅರಿವು ಸರ್ಕಾರಕ್ಕೆ ಉಂಟಾಗುವಂತೆ ಮಾಡುವುದೂ ಅವಶ್ಯ ಎನಿಸಿದೆ. ಸೀಸರನ ಹೆಂಡತಿ ಸಂಶಯಾತೀತೆ ಎಂಬ ಭ್ರಮೆ ಬಹುಕಾಲ ಉಳಿಯಲಾರದು.

## ವ್ಯಾಧಿ ಲಕ್ಷಣ

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಎಲ್ಲವೂ ಚೆನ್ನಿಲ್ಲ ಎಂಬುದು ಬಹಳ ಕಾಲದಿಂದಲೂ ಒಂದು ಬಹಿರಂಗ ರಹಸ್ಯ. ಆಡುವುದಿಲ್ಲ, ಆದರೆ ಎಲ್ಲರಿಗೂ ಗೊತ್ತು- ಎಂಬ ರೀತಿಯಲ್ಲಿ ಸಂಬಂಧಪಟ್ಟವರು ವ್ಯವಹರಿಸುತ್ತಿದ್ದಾರೆ. ಆದರೆ ನಿತ್ಯ ನೂತನವಸನ ವ್ಯಸನಿ ರಾಜನ ಬತ್ತಲೆತನವನ್ನು ಏನೂ ಅರಿಯದ ಹಸುಳೆಯೊಂದು ಎಲ್ಲರಿಗೂ ಕೇಳುವಂತೆ ಕೂಗಿ ಹೇಳಿದಂತೆ ನ್ಯೂ ಬ್ಯಾಂಕ್ ಆಫ್ ಇಂಡಿಯಾದ ಅಂಕಿ-ಅಂಶಗಳು ಸಾರಿಯೇಬಿಟ್ಟವು. ಇನ್ನೂ ಕೆಲವು ಬ್ಯಾಂಕುಗಳು ನಷ್ಟದ ಹಾದಿಯಲ್ಲಿವೆ. ಎಲ್ಲ ರಾಷ್ಟ್ರೀಕೃತ ಬ್ಯಾಂಕುಗಳ ಒಟ್ಟು ಲಾಭ ಮೂರು ವರ್ಷಗಳಲ್ಲಿ ಸುಮಾರು ರೂ. ೨೫೦ ಕೋಟಿಗೂ ಹೆಚ್ಚಾಗಿ ಇಳಿದಿದೆಯೆಂದು ಅಂಕಿಗಳು ಸಾರುತ್ತವೆ. ನೀಡಿದ ಸಾಲಗಳು ವಾಪಸು ಬಾರದಿದ್ದಾಗ, ನಿಧಿಗಳ ಪುನಶ್ಚಕ್ರೀಕರಣ ಸಾಧ್ಯವಾಗದಾದಾಗ, ಗ್ರಾಮೀಣ ಸಾಲಗಾರರಲ್ಲಿ ಅನೇಕರು ಪಡೆದ ಸಾಲದ ಹಣವನ್ನು ಮರಳಿಸುವ ಅಗತ್ಯವಿಲ್ಲವೆಂಬ ಧೋರಣೆ ತಳೆಯತೊಡಗಿದಾಗ ಬ್ಯಾಂಕುಗಳ ಕರಡು ಸಾಲ ಹೆಚ್ಚುತ್ತಿರುವಾಗ ಇಂಥ ಪರಿಸ್ಥಿತಿ ಸಹಜವೇ. ಬ್ಯಾಂಕ್ ಆಸ್ತಿಗಳ ಗಮನಾರ್ಹ ಭಾಗ ಕ್ರಿಯಾಶೀಲವಾಗದಿರುವಾಗ, ಠೇವಣಿಗಳಲ್ಲಿ ಅರ್ಧಕ್ಕೂ ಹೆಚ್ಚು ಭಾಗ ಪರಿನಿಯತ ಮೀಸಲುಗಳಾಗಿ ಪರಿವರ್ತಿತವಾಗಿ ಅಲ್ಪ ಆದಾಯ ಸಂಪಾದಕಗಳಾದಾಗ, ಬ್ಯಾಂಕುಗಳ ಸಂಪಾದನೆಗೆ ಗರಿಷ್ಠ ಮಿತಿಯನ್ನು ನಿಗದಿಗೊಳಿಸಿದಾಗ ಅವು ನಷ್ಟದ ಹಾದಿ ಹಿಡಿಯಬೇಕಾದ್ದು ಅನಿವಾರ್ಯವಾಗುತ್ತದೆ. ದುರ್ಬಲ ಬ್ಯಾಂಕುಗಳು ಬೇಗ ಆ ಹಾದಿ ಹಿಡಿದರೆ, ಸ್ವಲ್ಪ ಬಲಿಷ್ಠವಾದವುಗಳಲ್ಲಿ ಈ ಪ್ರವೃತ್ತಿ ತಡವಾಗಿ ತಲೆಹಾಕುತ್ತದೆ. ದುರ್ಬಲವಾದ ಬ್ಯಾಂಕುಗಳನ್ನು ಬಲಿಷ್ಠ ಬ್ಯಾಂಕುಗಳಲ್ಲಿ ವಿಲೀನಗೊಳಿಸುವ ಮಾತೂ ಕೇಳಿಬರುತ್ತಿದೆ. ಕೆಲವು ಬಲಿಷ್ಠ ಬ್ಯಾಂಕುಗಳು ಪ್ರತಿಷ್ಠೆ ಬೆಳಸಿಕೊಳ್ಳುವ ಆಶೆಯಿಂದ ಈ ದುರ್ಬಲ ಬ್ಯಾಂಕುಗಳನ್ನು ವಿಲೀನಗೊಳಿಸಿಕೊಳ್ಳಲು ಮುಂದಾಗಿದ್ದುವೆಂದೂ ಸುದ್ದಿ. ಸದ್ಯಕ್ಕೆ ಸರ್ಕಾರ ಇದಕ್ಕೂ ಉತ್ತೇಜನ ನೀಡದಿರಬಹುದು. ಆದರೆ ಇಡೀ ಬ್ಯಾಂಕಿಂಗ್ ವ್ಯವಸ್ಥೆಯನ್ನೇ ಪುನರ್ರಚನೆಗೊಳಿಸಿ ಅವುಗಳ ಸಂಖ್ಯೆಯನ್ನು ಇಳಿಸಿ, ಸಮನ್ವಯವನ್ನು ಸಾಧಿಸುವ ಚಿಂತನೆಯೂ ನಡೆದಿದೆ. ಆದರೆ ಮೂಲಭೂತವಾಗಿ ಅವುಗಳ ವ್ಯವಹಾರವನ್ನು ವೈಜ್ಞಾನಿಕ ತಳಹದಿಯ ಮೇಲೆ ನೇರ್ಪುಗೊಳಿಸದಿದ್ದರೆ, ಲಾಭ-ನಷ್ಟಗಳ ತಕ್ಕಡಿಯಲ್ಲಿ ತೂಗದಿದ್ದರೆ, ಅವುಗಳ ಪ್ರಾದೇಶಿಕ ಸ್ವರೂಪವನ್ನು ಕೂಡ ಗಣನೆಗೆ ತೆಗೆದುಕೊಳ್ಳದಿದ್ದರೆ, ಇಂಥ ಪುನರ್ರಚನೆಯೆಲ್ಲ ಮತ್ತೆ ಕೆಲವು ಹಿತಗಳೊತ್ತಡಗಳ ಪರಿಣಾಮವಾಗಿ ವಕ್ರವಾಗಿ ಮೈತಳೆಯ ಬಹುದಾದ ಅಪಾಯ ಇದ್ದೇ ಇದೆ.

ಸಾಮಾಜಿಕ ಆರ್ಥಿಕ ಪರಿವರ್ತನೆಯ ಹೊಣೆ ಹೊತ್ತ ಬ್ಯಾಂಕುಗಳು ಯಾವಾಗಲೂ ಲಾಭ ಸಂಪಾದನೆಯ ನಿಟ್ಟಿನಲ್ಲೇ ಚಿಂತಿಸಬಾರದೆಂಬುದು ನಿಜ. ಆದರೆ ಎರಡೂ ತುದಿಗಳು ಕೂಡಬೇಕೆಂಬುದನ್ನು ಮರೆಯುವಂತಿಲ್ಲ. ಅವಕ್ಕೆ ವಹಿಸಿಕೊಡುವ ಕಾರ್ಯಗಳಿಗೆ ತಗಲುವ ವೆಚ್ಚವೆಷ್ಟು? ಅದಕ್ಕೆ ಅಗತ್ಯವಾದ ಸಿಬ್ಬಂದಿ ಲಭ್ಯವಿದೆಯೆ? ಪರಿಣತಿಯನ್ನು ದೊರಕಿಸಿಕೊಳ್ಳಲಾಗಿದೆಯೇ ಎಂಬುದನ್ನು ಕುರಿತು ಚಿಂತಿಸುವುದೂ ಅಗತ್ಯ. ಬ್ಯಾಂಕುಗಳ ಪರಿಚಾಲನೆಯ ವೆಚ್ಚ ಅಗಾಧವಾಗಿ ಏರಿದೆ. ಅವುಗಳ ಸಿಬ್ಬಂದಿ ಬೆಳೆದಿದ್ದರೂ ಅದಕ್ಕೆ ಅನುಗುಣವಾಗಿ ಉತ್ಪಾದಕತೆ ಬೆಳೆದಿಲ್ಲ. ಪ್ರತಿ ಹತ್ತು ಲಕ್ಷ ಡಾಲರುಗಳ ಮೌಲ್ಯದ ಆಸ್ತಿಗಳಿಗೆ ಭಾರತದಲ್ಲಿನ ಬ್ಯಾಂಕ್ ಸಿಬ್ಬಂದಿ ಇತರ ದೇಶಗಳಿಗೆ ಹೋಲಿಸಿದರೆ ಬಲು ಅಧಿಕ ಎಂದು ಒಂದು ಅಧ್ಯಯನ ತಿಳಿಸುತ್ತದೆ. ಇದು ಪಾಕಿಸ್ತಾನದಲ್ಲಿರುವುದಕ್ಕಿಂತ ಶೇ. ೪೦ ರಷ್ಟು, ಇಂಡೋನೇಷಿಯದಲ್ಲಿರುವುದಕ್ಕಿಂತ ಶೇ. ೧೫೦ ರಷ್ಟು, ಮಲೇಷಿಯದ್ದಕ್ಕಿಂತ ಶೇ. ೩೦ ರಷ್ಟು ಹೆಚ್ಚು ಎಂಬುದು ಅದರ ಕಾಣಿಕೆ. ಹೆಚ್ಚುತ್ತಿರುವ ವೆಚ್ಚ, ಕರಗುತ್ತಿರುವ ಲಾಭ, ವಿಸ್ತರಿಸುತ್ತಿರುವ ಅಶಿಸ್ತು ಮತ್ತು ಅದಕ್ಷತೆ, ಅನಿಯಂತ್ರತೆ - ಇವು ನಮ್ಮ ಬ್ಯಾಂಕಿಂಗ್ ವ್ಯವಸ್ಥೆಯ ಭೀಕರ ಕೋಡುಗಳು.

## ಮಧ್ಯಸ್ಥಗಾರಿಕೆ ಚ್ಯುತಿ

ಬ್ಯಾಂಕಿಂಗ್ ಸೇವೆ ವಿಸ್ತರಿಸಿದಂತೆ ಠೇವಣಿಗಳೂ ಮುಂಗಡಗಳೂ ಹೆಚ್ಚುತ್ತಿವೆಯೆಂಬುದನ್ನು ಅಂಕಿ-ಅಂಶಗಳು ಸಾರುತ್ತವಾದರೂ ಇವುಗಳ ಪಥವೀಕ್ಷಣೆಯಿಂದ ಹಲವಾರು ಸ್ವಾರಸ್ಯಕರವಾದ - ಆದರೆ ಅಪಥ್ಯವೆನಿಸುವ-ಪ್ರವೃತ್ತಿಗಳು ಗೋಚರವಾಗುತ್ತವೆ. ರಾಷ್ಟ್ರೀಕರಣಾನಂತರದ ವರ್ಷಗಳಲ್ಲಿ ಠೇವಣಿಗಳು ಬಲು ವೇಗವಾಗಿ ವರ್ಧಿಸಿದುವೆಂಬುದು ನಿಜ. ಅದಕ್ಕೆ ಮುಂಚಿನ ಹತ್ತು ವರ್ಷಗಳಲ್ಲಿ ಪ್ರಮುಖ ಬ್ಯಾಂಕುಗಳ ಠೇವಣಿಗಳು ಶೇ. ೧೩.೩೮ ವಾರ್ಷಿಕ ದರದಲ್ಲಿ ಬೆಳೆಯುತ್ತಿದ್ದುವು. ಅನಂತರದ ಮೊದಲನೆಯ ದಶಕದಲ್ಲಿಯ ವಾರ್ಷಿಕ ಏರಿಕೆ ದರ ಶೇ. ೨೧. ಮುಂಗಡಗಳೂ ಹೀಗೆಯೇ ಏರಿದುವು. ಅನಂತರದ ದಶಕದಲ್ಲೂ ಇವೆರಡೂ ಹೆಚ್ಚಿದುವಾದರೂ ಏರಿಕೆಯ ದರಗಳು ಇಳಿದಿವೆ. ಆರಂಭದಲ್ಲಿ ಹೆಚ್ಚಿದುವಾದರೂ ಏರಿಕೆ ದರಗಳು ಇಳಿದಿವೆ. ಆರಂಭದಲ್ಲಿ ಕುಟುಂಬ ವಲಯದ ಉಳಿತಾಯ ಬಹುತೇಕ ಬ್ಯಾಂಕ್ ಠೇವಣಿಗಳಾಗಿ ಪರಿವರ್ತನೆಗೊಳ್ಳುತ್ತಿತ್ತು. ಈಗ ಆ ಉಳಿತಾಯದ ಹೆಚ್ಚು ಹೆಚ್ಚು ಭಾಗ ಇತರ ವಿನಿಯೋಜನ ಮಾರ್ಗಗಳ

ಅನ್ವೇಷಣೆಯಲ್ಲಿ ತೊಡಗುತ್ತಿವೆ. ಉಳಿತಾಯದ ಉದ್ದೇಶಕ್ಕೂ ವಿಸ್ತರಿಸುತ್ತಿರುವುದೂ ಅವನ್ನು ಪೂರೈಸಬಲ್ಲ ಇತರ ವಿನಿಯೋಜನಾವಕಾಶಗಳು ಲಭ್ಯವಿರುವುದೂ ಇದಕ್ಕೆ ಕಾರಣ. ಉಳಿತಾಯದ ಸಂಗ್ರಹಣೆಯಲ್ಲಿ ಬ್ಯಾಂಕುಗಳೊಂದಿಗೆ ಇತರ ಸಂಸ್ಥೆಗಳು ಸ್ಪರ್ಧಿಸುತ್ತಿವೆ. ಬ್ಯಾಂಕುಗಳು ನೀಡುವುದಕ್ಕಿಂತ ಹೆಚ್ಚು ಆಕರ್ಷಕವಾಗಿರುವ ಇತರ ನಾನಾ ಅವಕಾಶಗಳು ಇಂದು ಒದಗುತ್ತಿವೆ. ಬ್ಯಾಂಕುಗಳು ಮಾತ್ರ ಈ ವಿಚಾರದಲ್ಲಿ ಹಲವು ನಿರ್ಬಂಧಗಳಿಗೆ ಒಳಗಾಗಿವೆ. ಉಳಿತಾಯದಾರರಿಂದ ಹಣ ಸಂಗ್ರಹಿಸುವುದೂ ಹಾಗೂ ವಿನಿಯೋಜನದಾರರಿಗೆ ಮುಂಗಡ ನೀಡುವುದು–ಇವೆರಡೂ ಬ್ಯಾಂಕುಗಳ ಮುಖ್ಯ ಕಾರ್ಯಭಾರಗಳು. ಈ ಎರಡೂ ನಿಟ್ಟುಗಳಲ್ಲಿ ಬ್ಯಾಂಕುಗಳ ಮಧ್ಯಸ್ಥಗಾರಿಕೆಗೆ ಚ್ಯುತಿ ಬರುತ್ತಿರುವುದು ಇತ್ತೀಚಿನ ಪ್ರವೃತ್ತಿ. ಹಿಂದೆ ಬ್ಯಾಂಕುಗಳಿಂದ ದುಡಿಯುವ ಬಂಡವಾಳಕ್ಕಾಗಿ ಸಾಲ ಪಡೆಯುತ್ತಿದ್ದವರು ಈಗ ನೇರವಾಗಿಯೇ ಉಳಿತಾಯದಾರರನ್ನು ಸಂಪರ್ಕಿಸುತ್ತಿದ್ದಾರೆ. ಆಕರ್ಷಕ ಯೋಜನೆಗಳನ್ನು ನೀಡುತ್ತಿದ್ದಾರೆ. ಹೀಗಾಗಿ ಉಭಯತಃ ಬ್ಯಾಂಕುಗಳು ಆತಂಕಕ್ಕೆ ಒಳಗಾಗಿವೆ. ಮೊದಲೇ ತಮ್ಮ ನಿಧಿಗಳ ಬಹುಪಾಲನ್ನು ಪರಿನಿಯುತ ಅನುಪಾತ ಪಾಲನೆಗಾಗಿ ತೆಗೆದಿಡಬೇಕಾದ ಹಾಗೂ ಸರ್ಕಾರ ವಿಧಿಸಿ ಕ್ಷೇತ್ರಗಳಿಗೆ ಸಾಲ ನೀಡಲು ಬಳಸಬೇಕಾದ ಬ್ಯಾಂಕುಗಳು ತಮ್ಮ ಉಳಿದ ನಿಧಿಗಳನ್ನು ಲಾಭದಾಯಕವಾಗಿ ಹೇಗೆ ವಿನಿಯೋಜಿಸಬೇಕು, ಉಳಿತಾಯದಾರರಿಂದ ಹೋಗೆ ಹೆಚ್ಚು ನಿಧಿ ಪಡೆದುಕೊಳ್ಳಬೇಕು ಎಂದು ಯೋಚಿಸತೊಡಗಿವೆ. ಮಧ್ಯಸ್ಥಗಾರಿಕೆಯ ಚ್ಯುತಿ ಭಾರತದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಮಾತ್ರವೇ ತಲೆದೋರಿರುವ ಪ್ರವೃತ್ತಿಯಲ್ಲ. ಇತರ ದೇಶಗಳಲ್ಲೂ ಕಂಡುಬಂದಿವೆ ಎಂಬುದೂ ನಿಜ. ಆದು ಹಿಂದೆ ಹೇಳಿ ಕಾರಣಗಳಿಂದಾಗಿ ಇಲ್ಲಿ ಅವು ಕ್ರಾನಿಕ್ ಸ್ವರೂಪ ಪಡೆದಿವೆ. ಇತರ ದೇಶಗಳ ಬ್ಯಾಂಕುಗಳು ನಡೆಸುವ ಪ್ರಯೋಗಗಳನ್ನು ಇಲ್ಲೂ ಅವು ನಡೆಸುತ್ತಿವೆ. ತಮ್ಮ ಕಲಾಪಗಳನ್ನು ವೈವಿಧ್ಯೀಕರಣಗೊಳಿಸಿಕೊಳ್ಳುತ್ತಿವೆ. ಉದರಿ ಕಾರ್ಡ್ ನೀಡಿಕೆ, ಬಳಕೆದಾರರಿಗೆ ಉದರಿ ಪೂರೈಕೆ, ಗ್ರಾಹಕ ಷೇರು–ಸ್ಟಾಕ್ ವ್ಯವಹಾರದ ನಿರ್ವಹಣೆ, ಉದ್ಯಮ ಸಂಸ್ಥೆಗಳ ಬಂಡವಾಳ ನೀಡಿಕೆಯ ನಿರ್ವಹಣೆ ಮತ್ತು ಸಲಹಾ ಸೇವೆ, ಗುತ್ತಿಗೆ ವ್ಯವಹಾರ, ಹೊಸ ಸಂಸ್ಥೆಗಳ ಬಂಡವಾಳದಲ್ಲಿ ಹಣ ತೊಡಗಿಸುವಿಕೆ, ಪರಸ್ಪರ ನಿಧಿ, ಉದ್ಯಮಿಗಳ ಸಾಲ ವಸೂಲಿ ಕಾರ್ಯ ಹಾಗೂ ಅದನ್ನು ವಹಿಸಿಕೊಳ್ಳುವಿಕೆ, ವಸತಿಗಾಗಿ ಹಣಕಾಸು ಮುಂತಾದ ನಾನಾ ಕಲಾಪಗಳನ್ನು ಅವು ಹಮ್ಮಿಕೊಳ್ಳುತ್ತಿವೆ. ಇವನ್ನು ನೇರವಾಗಿ ನಿರ್ವಹಿಸುವ ಎಷ್ಟು ಸಂಪನ್ಮೂಲವಿವೆ, ಆಧೋರಚನೆಯೆಷ್ಟಿದೆ, ಇವುಗಳ ಸಾಧ್ಯತೆಯೆಷ್ಟು, ತೊಡಕುಗಳೇನು, ಈ ಕಾರ್ಯ ನಡೆಸಲು ಅಗತ್ಯವಾದ ಪರಿಣತ ಸಿಬ್ಬಂದಿಯಿದೆಯೆ– ಮುಂತಾದವುಗಳ ಮುಂದಾಲೋಚನೆ ಅಷ್ಟೇನೂ ನಡೆದಿಲ್ಲ. ಈ ಕ್ಷೇತ್ರಗಳಲ್ಲಿ ಆಗಲೇ ಸಾಕಷ್ಟು ಸ್ಪರ್ಧೆಯೂ ಏರ್ಪಟ್ಟಿದೆ. ಸರ್ಕಾರವು ನಿಧಾನವಾಗಿ ಕಟ್ಟುಪಾಡುಗಳನ್ನು ವಿಧಿಸತೊಡಗಿದೆ. ಇವುಗಳ ವೆಚ್ಚ–ಲಾಭ ಅಧ್ಯಯನವಿನ್ನೂ ಸರಿಯಾಗಿ ನಡೆದಿಲ್ಲ. ಈ ಎಲ್ಲ ಕಲಾಪಗಳನ್ನೂ ಎಲ್ಲ ಬ್ಯಾಂಕುಗಳೂ ಹಮ್ಮಿಕೊಳ್ಳುವಂತಿಲ್ಲ. ದೊಡ್ಡ ಬ್ಯಾಂಕುಗಳ ಮಾತ್ರ ಈ ಸಾಹಸದಲ್ಲಿ ಕೈಹಾಕಬಲ್ಲುವು. ಸಣ್ಣವು ಇವುಗಳನ್ನು ಹಮ್ಮಿಕೊಳ್ಳುವಂತಿಲ್ಲ.

ಭಾರತದ ರಾಷ್ಟ್ರೀಕೃತ ಬ್ಯಾಂಕುಗಳು ಈಗ ಸಂಧಿಕಾಲದಲ್ಲಿವೆ. ಇವು ಸರ್ಕಾರಿ ಸಂಸ್ಥೆಗಳಾದ್ದರಿಂದ ಏನೂ ಭಯವಿಲ್ಲ ಎಂದು ಯಾರೂ ನಿಶ್ಚಿಂತೆಯಿಂದಿರುವಂತಿಲ್ಲ. ಇವನ್ನು ಹಠಾತ್ತನೆ ಖಾಸಗೀಕರಣಗೊಳಿಸುಂತೆಯೂ ಇಲ್ಲ. ಖಾಸಗಿ ವಲಯದ ದೋಷನಿವಾರಣೆಗೆಂದು ರಾಷ್ಟ್ರೀಕರಣದ ಹಾದಿ ಹಿಡಿದಿವೆ. ರಾಷ್ಟ್ರೀಕರಣವೇನೂ ಸಂಜೀವಿನಿಯಲ್ಲವಂದು ಈಗ ಖಾಸಗೀಕರಣದ ಕೂಗು ಎದ್ದಿದೆ. ಬ್ಯಾಂಕಿಂಗ್ ಕ್ಷೇತ್ರಕ್ಕೆ ಇದಿನ್ನೂ ಹಬ್ಬಿಲ್ಲವಾದರೂ, ಖಾಸಗಿ ವಲಯದ ಬ್ಯಾಂಕುಗಳು ಎಷ್ಟೋ ವಾಸಿ ಎಂದು ಅವುಗಳತ್ತ ಬೆಟ್ಟು ಮಾಡಿ ತೋರಿಸುವುದು ಆರಂಭವಾಗಿದೆ. ರಾಷ್ಟ್ರೀಕರಣ, ಖಾಸಗೀಕರಣ–ಎಂಬ ಘೋಷಣೆಗಳಿಂದಲೇ ಯಾವ ಯುಕ್ತಿಣಿಯೂ ಸಾಧ್ಯವಿಲ್ಲ. ವೈಜ್ಞಾನಿಕ ಚಿಂತನೆ, ಸುವ್ಯವಸ್ಥೆಯ ಸಾಧನೆಗಾಗಿ ಸಂಘಟಿತ ಪ್ರಯತ್ನ, ಪ್ರಾದೇಶಿಕ ಅವಶ್ಯಕತೆಗಳಿಗೆ ಹಾಗೂ ಆಶೋತ್ತರಗಳಿಗೆ ಅನುಗುಣವಾಗಿ ಕಾರ್ಯ ಯೋಜನೆ–ಇವು ಎಂದಿನಂತೆ ಇಂದಿಗೂ ನಮ್ಮಲ್ಲಿ ಅಭಾವವೇ. ●

*ಸಂಪಾದಕೀಯ*

*ಬ್ಯಾಂಕಿಂಗ್ ಪ್ರಪಂಚ – ಮಾರ್ಚ್ ೧೯೯೧*

# ಗ್ರಾಹಕರ ಸೇವೆಯಲ್ಲಿ ಹೊಸ ಆಯಾಮಗಳು

ಬಿ. ಎಸ್. ಚಂದ್ರಶೇಖರ

ಒಂದು ಕಾಲದಲ್ಲಿ ಬ್ಯಾಂಕುಗಳ ಗ್ರಾಹಕ ವರ್ಗ ಕಿರಿದಾಗಿತ್ತು. ಅಂದು ಗ್ರಾಹಕನೇ ಸಾರ್ವಭೌಮನಾಗಿ ಸೇವೆ ಪಡೆಯುತ್ತಿದ್ದ. ಈಗ ಸೇವೆಯ ಅರ್ಥ, ವ್ಯಾಪ್ತಿ ಬೆಳೆದಿವೆ. ಅಂತೆಯೇ ಅದಕ್ಕೆ ಹೊಸ ಆಯಾಮಗಳೂ ಮೂಡಿವೆ. ಬ್ಯಾಂಕುಗಳು ತಮ್ಮ ಸಾಂಪ್ರದಾಯಿಕ ಜಾಡಿನಿಂದ ದೂರ ಸರಿಯುತ್ತಿವೆ. ಗ್ರಾಹಕ ಸೇವೆಗೆ ನಗೆಮೊಗವೊಂದೇ ಸಾಲದು. ಬೇರೇನು ಬೇಕೆಂಬುದನ್ನೂ ಸೇವೆಯ ನಾನಾ ರೀತಿ ರಿವಾಜುಗಳನ್ನೂ ಲೇಖಕರು ವಿವರಿಸಿದ್ದಾರೆ.

ಬ್ಯಾಂಕ್ ಸೇವೆಯ ಎಲ್ಲ ಹಂತಗಳಲ್ಲೂ ಗ್ರಾಹಕ ಸೇವೆಯೇ ಸರ್ವಪ್ರಧಾನವಾದ ಅಂಶವೆಂಬುದು ನಿರ್ವಿವಾದ. ಅದು ಉತ್ತಮಗೊಂಡರೆ ಗ್ರಾಹಕರ ಹಾಗೂ ಬ್ಯಾಂಕಿನ ಉದ್ದೇಶ ಸಾರ್ಥಕವಾಗುತ್ತದೆ.

### ಬಹುಮುಖಿ, ಸರ್ವವ್ಯಾಪಿ

ಮೂಲಭೂತವಾಗಿ ಬ್ಯಾಂಕಿಂಗ್ ಒಂದು ಸೇವಾ ಕೈಗಾರಿಕೆ. ಅದರ ಸೇವೆ ಬಹುಮುಖಿವುಳ್ಳದ್ದು. ಅನಿವಾಸಿ ಭಾರತೀಯರೂ ಸೇರಿದಂತೆ ಸಾರ್ವಜನಿಕರಿಂದ ಠೇವಣಿ ಸಂಗ್ರಹಣೆ, ಠೇವಣಿ ಖಾತೆಗಳ ನಿರ್ವಹಣೆ, ಸಮಾಜದ ವಿವಿಧ ವರ್ಗಗಳಿಗೆ ಹಲವು ಹತ್ತು ಯೋಜನೆಗಳ ಮೂಲಕ ಸಾಲ ನೀಡಿಕೆ–ಇಂಥ ಚಟುವಟಿಕೆಗಳಿಗೆ ಮೀಸಲಾಗಿದ್ದ ಬ್ಯಾಂಕ್ ಸೇವೆಗಳು ಈಗ ಹೊಸ ಆಯಾಮ ತಳೆದಿವೆ. ಹಣ ರವಾನೆ, ಸಂಲೇಖಗಳ ವಸೂಲಾತಿ, ಖಾತರಿ ಹಾಗೂ ಉದರಿ ಪತ್ರ (guarantee, letter of credit) ಗಳ ನೀಡಿಕೆ, ಸುರಕ್ಷಾ ಠೇವಣಿ ಕಪಾಟುಗಳ ನಿರ್ವಹಣೆ, ಸರಕಾರಿ ವ್ಯವಹಾರ, ಪ್ರವಾಸಿ ಚೆಕ್ಕುಗಳು–ಕೊಡುಗೆ ಚೆಕ್ಕುಗಳು– ಇವು ಹೊಸದಾಗಿ ಉಳಿದಿಲ್ಲ. ಬಹುತೇಕ ಸರಕಾರಿ ಇಲಾಖೆಗಳ ಪಿಂಚಣಿಗಳ ಪಾವತಿ ಬ್ಯಾಂಕುಗಳ ಮೂಲಕವೇ. ಸಾಲ ಯೋಜನೆಗಳಲ್ಲಿ ಹೊಸ ಹೊಸವು ಸೇರಿಕೊಳ್ಳುತ್ತಿವೆ. ಬಳಕೆದಾರರು ಬಯಸುವ ದೀರ್ಘಕಾಲಿಕ ಆಸ್ತಿಗಳನ್ನು ಕೊಳ್ಳಲು ಬ್ಯಾಂಕುಗಳು ಆರಂಭಿಸಿರುವ ಯೋಜನೆಗಳು ಈಗ ಜನಪ್ರಿಯವಾಗತೊಡಗಿವೆ. ಗೃಹ ನಿರ್ಮಾಣಕ್ಕೆ, ಗಣಕ ಹಾಗೂ ದ್ವಿಚಕ್ರ ವಾಹನಗಳ ಖರೀದಿಗೆ, ವಿದ್ಯಾರ್ಥಿಗಳ ವ್ಯಾಸಂಗಕ್ಕೆ, ಪಿಂಚಣಿದಾರರ ವೈದ್ಯಕೀಯ ಖರ್ಚುಗಳಿಗೆ, ಕೊನೆಗೆ ಪ್ರವಾಸಗಳಿಗೂ ವಿಶೇಷ ಸಾಲ ಯೋಜನೆಗಳಿವೆ. ಉದರಿ ಕಾರ್ಡುಗಳು ಬ್ಯಾಂಕಿಂಗ್ ಸೇವೆಯ ಈಚಿನ ಕೊಡುಗೆಗಳು. ರೈತರಿಗೆ ವಿಶೇಷ ಅನುಕೂಲ ಒದಗಿಸುವ ಹಸಿರು ಕಾರ್ಡ್ ಎಂಬ ಹೆಸರಿನ ಉದರಿ ಕಾರ್ಡುಗಳು ಪ್ರಯೋಗಿಸಲ್ಪಟ್ಟಿವೆ.

ಇದರಿಂದ ಸ್ಪಷ್ಟವಾಗುವ ಒಂದು ಅಂಶವೆಂದರೆ, ಬ್ಯಾಂಕ್ ಸೇವೆಗಳು ಬಹುಮುಖಿವಾಗಿಯೂ ಸರ್ವವ್ಯಾಪಿಯಾಗಿಯೂ ಬೆಳೆಯುತ್ತಿವೆ ಎಂಬುದು.

### ರಂಗದಿಂದೊಂದಷ್ಟು ದೂರ

ಗುತ್ತಿಗೆ ವ್ಯವಹಾರ (Leasing business) ಬ್ಯಾಂಕುಗಳು ಸೇವೆಯ ಇನ್ನೊಂದು ಆಯಾಮ. ಬ್ಯಾಂಕುಗಳು ನೇರವಾಗಿ ಈ ವ್ಯವಹಾರ ಮಾಡಲು ಅವಕಾಶವಿಲ್ಲದಿರುವುದರಿಂದ ಉಪಸಂಸ್ಥೆಗಳ ಮೂಲಕ ಮಾಡುತ್ತಿವೆ. ಪರಸ್ಪರ ನಿಧಿಯನ್ನು (Mutual fund) ಆರಂಭಿಸಿದ್ದು ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಆದರೂ ಭಾರತೀಯ ಅರ್ಥ ವ್ಯವಸ್ಥೆಯಲ್ಲಿ ಈ ಪರಿಕಲ್ಪನೆ ನೆಲೆಗೊಳ್ಳಲು ಬ್ಯಾಂಕುಗಳೇ ಮುಖ್ಯ ಕಾರಣ ಎನ್ನಬಹುದು. ಋಣಾಭಿಕರಣ (factoring) ಸೇವೆಯಲ್ಲೂ ಬ್ಯಾಂಕುಗಳು ಆಸಕ್ತಿ ವಹಿಸಿವೆ. ಕೈಗಾರಿಕಾ ಘಟಕಗಳು ತಮ್ಮ ಉತ್ಪನ್ನಗಳನ್ನು ಮಾರುವಾಗ ಉದರಿ ನೀಡುವುದು ಸಾಮಾನ್ಯ. ಆದರೆ ಬಾಕಿಗಳ ವಸೂಲಾತಿಗೆ ಅವು ಹೆಣಗಬೇಕಾಗುತ್ತದೆ. ಸಂಸ್ಥೆಯೊಂದು ಯುಕ್ತ ಶುಲ್ಕಪಡೆದ ಈ ಹೊಣೆ ನಿರ್ವಹಿಸುವುದೇ ಋಣಾಭಿಕರಣ. ದೇಶದಲ್ಲಿ ಇದೀಗ ಭಾರತದ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್(SIDBI) ಹಾಗೂ ಭಾರತೀಯ ಸ್ಟೇಟ್ ಬ್ಯಾಂಕ್ ಋಣಾಭಿಕರಣ ಕ್ಷೇತ್ರದ ಮುಂಚೂಣಿಯಲ್ಲಿವೆ. ಕೈಗಾರಿಕೆಗಳ ದುಡಿಯುವ ಬಂಡವಾಳದ ಒತ್ತಡವನ್ನು ನೀಗಿಸುವಲ್ಲಿ ಋಣಾಭಿಕರಣದಿಂದ ಬಹಳಷ್ಟು ನಿರೀಕ್ಷಿಸಲಾಗಿದೆ.

ಇಂದು ಬ್ಯಾಂಕುಗಳು ತಮ್ಮ ಮೂಲ ಕ್ಷೇತ್ರದಿಂದ ಒಂದಿಷ್ಟು ದೂರ ಸರಿದಿವೆಂಬುದನ್ನು ಮೇಲಿನ ಸಂಗತಿಗಳಿಂದ

ತಿಳಿಯಬಹುದು. ಸಮಾಜಕ್ಕೆ ಇನ್ನಷ್ಟು ಕಾಣಿಕೆ ಸಲ್ಲಿಸಬೇಕೆನ್ನುವ ಬ್ಯಾಂಕುಗಳ ಕಳಕಳಿಗೆ ಸಮುದಾಯ ಸೇವಾ ಬ್ಯಾಂಕಿಂಗ್ (Community Services Banking) ಯೋಜನೆಗಳು ಕನ್ನಡಿ ಹಿಡಿಯುತ್ತವೆ.

## ಹೆಚ್ಚಿದ ನಿರೀಕ್ಷೆ, ಸರ್ವ ಯತ್ನ

ಬ್ಯಾಂಕ್ ಗ್ರಾಹಕ ವರ್ಗ ತಕ್ಕಮಟ್ಟಿಗೆ ಕಿರಿದಾಗಿದ್ದು, ಗ್ರಾಹಕನೇ ಸಾರ್ವಭೌಮನಾಗಿ ಸೇವೆ ಪಡೆಯುತ್ತಿದ್ದ ದಿನಗಳು ಮರೆಯಾಗಿವೆ. ಬ್ಯಾಂಕ್ ಶಾಖೆಗಳಲ್ಲಿ ಕೆಲಸದ ಒತ್ತಡ ಹೆಚ್ಚುತ್ತಿದೆ. ಗ್ರಾಹಕರ ನಿರೀಕ್ಷೆಗಳೂ ಹೆಚ್ಚುತ್ತಲೇ ಇವೆ. ಸೇವೆಯ ಗುಣಮಟ್ಟ ಕಾಪಾಡಲು, ಉತ್ತಮಪಡಿಸಲು ಬ್ಯಾಂಕುಗಳಲ್ಲಿ ಸರ್ವಯತ್ನ ನಡೆಯುತ್ತಿದೆ. ಗ್ರಾಹಕ ಸೇವಾ ಸಮಿತಿಯ ಶಿಫಾರಸುಗಳು ಜಾರಿಗೆ ಬಂದು, ಚೆಕ್ಕುಗಳಿಗೆ ತಕ್ಷಣ ನಗದು ಪಾವತಿಯಾಗಲು ಟೆಲರ್ ವ್ಯವಸ್ಥೆ ಬಂದು, ವಿವಿಧ ವಹಿವಾಟುಗಳಿಗೆ ಸಮಯ ಪ್ರಮಾಣಗಳು (Time norms) ನಿಗದಿಗೊಂಡು ಅವನ್ನು ಸೂಚಿಸುವ ಫಲಕಗಳು ಬ್ಯಾಂಕಿನ ಆವರಣದಲ್ಲಿ ನೆಲೆಗೊಂಡವು.

ಪ್ರತಿ ಶಾಖೆಯಲ್ಲೂ ಗ್ರಾಹಕ ಸೇವಾ ಸಮಿತಿಯಿದೆ. ಮೂರು ತಿಂಗಳಿಗೊಮ್ಮೆ ದೊಡ್ಡ ಶಾಖೆಗಳಲ್ಲಿ ಪ್ರತಿ ತಿಂಗಳು ಸಭೆ ಸೇರಿ ಗ್ರಾಹಕರ ಕುಂದುಕೊರತೆ ಕುರಿತು ಚರ್ಚಿಸಿ ನಿರ್ಧಾರ ಕೈಗೊಳ್ಳುವ ಈ ಸಮಿತಿಯಲ್ಲಿ ಬ್ಯಾಂಕ್ ಉದ್ಯೋಗಿಗಳೇ ಸದಸ್ಯರು. ಇದಲ್ಲದೆ ತ್ರೈಮಾಸಿಕ ಗ್ರಾಹಕ ಸಂಪರ್ಕ ಕಾರ್ಯಕ್ರಮಗಳೂ (Consumer Relation Programme) ಉಂಟು. ಎಲ್ಲ ವರ್ಗಗಳ ಗ್ರಾಹಕರ ಸಭೆ ಕರೆದು ಅವರ ಅಹವಾಲುಗಳನ್ನು ಮುಕ್ತವಾಗಿ ಹೇಳಿಕೊಳ್ಳಲು ಮತ್ತು ಬ್ಯಾಂಕ್ - ಗ್ರಾಹಕರ ನಡುವಣ ಸಂಬಂಧ ಹಾರ್ದಿಕವಾಗಲು ಈ ಕಾರ್ಯಕ್ರಮಗಳ ನೆರವು ಪಡೆಯಲಾಗುತ್ತದೆ.

ಈಚೆಗೆ ಗ್ರಾಹಕ ಮಂಡಲಿಯ (Customer Council) ಪರಿಕಲ್ಪನೆ ಬಂದಿದೆ. ಬ್ಯಾಂಕ್ ಶಾಖೆಯ ಕೆಲವು ಪ್ರಮುಖ ಗ್ರಾಹಕರು ಈ ಮಂಡಲಿಯಲ್ಲಿದ್ದು, ಅವರು ನಿಗದಿತ ಅವಧಿಗೊಮ್ಮೆ ಸಭೆ ಸೇರಿ ಗ್ರಾಹಕರ ಕುಂದುಕೊರತೆಗಳನ್ನು, ಅವಕ್ಕೆ ಪರಿಹಾರೋಪಾಯಗಳನ್ನು ಬ್ಯಾಂಕಿಗೆ ಸೂಚಿಸುತ್ತಾರೆ. ಇಂಥ ಸಭೆ ಸಮಿತಿಗಳ ಉದ್ದೇಶ ಒಳ್ಳೆಯದು. ವ್ಯವಸ್ಥಿತವಾಗಿ ಅವು ಕೆಲಸ ಮಾಡಿದರೆ ಗ್ರಾಹಕ ಸೇವೆ ಉತ್ತಮಗೊಳ್ಳುವುದು ಖಂಡಿತ. ಆದರೆ ಅನೇಕ ಶಾಖೆಗಳು ಕೆಲಸದ ಒತ್ತಡದಿಂದಲೋ ಏನೋ, ಇವುಗಳತ್ತ ಗಮನ ಹರಿಸುತ್ತಿಲ್ಲ. ಈ ಸ್ಥಿತಿ ಬದಲಾಗಬೇಕು.

ಕಳೆದ ದಶಕದಲ್ಲಿ ಕೆಲಸದ ಗಾತ್ರ ಹೆಚ್ಚಿದಂತೆ ಬ್ಯಾಂಕುಗಳ ಸಿಬ್ಬಂದಿಯ ಸಂಖ್ಯೆ ಹೆಚ್ಚಿಲ್ಲ. ಇದು ಸೇವೆಯ ಗುಣಮಟ್ಟ ಕಾಯ್ದುಕೊಳ್ಳಲು ಅಡ್ಡಿಯಾಗಿವೆ. ಸಿಬ್ಬಂದಿಯ ಮನೋಭಾವವನ್ನು ಅದು ಗ್ರಾಹಕ ಸೇವೆಗೆ ಅನುವಾಗುವಂತೆ ರೂಪಿಸುವ ತರಬೇತಿ ಕಾರ್ಯಕ್ರಮಗಳನ್ನು ಬ್ಯಾಂಕುಗಳು ಹಮ್ಮಿಕೊಂಡಿವೆ. ಬ್ಯಾಂಕ್ ವಹಿವಾಟುಗಳನ್ನು ನಡೆಸುವಲ್ಲಿ ವ್ಯಾಪಕ ಯಾಂತ್ರೀಕರಣ, ಗಣಕೀಕರಣದಿಂದ ಪರಿಸ್ಥಿತಿ ಸುಧಾರಿಸುವ ಬ್ಯಾಂಕುಗಳ ಯತ್ನ ಸ್ವಾಗತಾರ್ಹ. ಇದರಿಂದ ಗ್ರಾಹಕರಿಗ ತ್ವರಿತ ಮತ್ತು ದಕ್ಷ ಸೇವೆ ದೊರೆತೀತು.

## ನಗೆಮೊಗದ ಸೇವೆ ಮಾತ್ರವಲ್ಲ, ದಕ್ಷ ಸೇವೆ

ಬ್ಯಾಂಕ್ ಗ್ರಾಹಕರು ಈಗ ಪ್ರಬುದ್ಧರಾಗಿದ್ದಾರೆ. ಅವರು ನಿರೀಕ್ಷಿಸುವುದು ಕೇವಲ ನಗೆಮೊಗದ ಸೇವೆಯನ್ನಷ್ಟೆ ಅಲ್ಲ. ದಕ್ಷ ಸೇವೆಯನ್ನು. ಏರುತ್ತಿರುವ ಬ್ಯಾಂಕ್ ಶುಲ್ಕಗಳು, ಹೆಚ್ಚುತ್ತಿರುವ ಸಾಲದ ಮೇಲಣ ಬಡ್ಡಿದರ, ಸೇವೆಯಲ್ಲಿ ವಿಳಂಬ, ಸಿಬ್ಬಂದಿಯ ಅಲಕ್ಷ್ಯ ಇವೆಲ್ಲಕ್ಕೂ ಗ್ರಾಹಕರು ಹಿಂದೆಂದಿಗಿಂತಲೂ ಹೆಚ್ಚು ತೀವ್ರವಾಗಿ ಸ್ಪಂದಿಸುತ್ತಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಏಕಸ್ವಾಮ್ಯವಿಲ್ಲದಿದ್ದರೂ ಏಕರೂಪದ ಬಡ್ಡಿ ಶುಲ್ಕಗಳಿರುವುದರಿಂದ ಸ್ಪರ್ಧೆ ಕಡಿಮೆಯಾಗಿರುವುದು ನಿಜ. ಹೀಗಾಗಿ ಸ್ಪರ್ಧಾತ್ಮಕ ವಾತಾವರಣದಿಂದ ಒದಗುವ ಸೌಲಭ್ಯದಿಂದ ಗ್ರಾಹಕ ವಂಚಿತನಾಗಿದ್ದಾನೆ.

ಗ್ರಾಹಕರ ಅಸಮಾಧಾನ ವಿವಿಧ ವೇದಿಕೆಗಳಲ್ಲಿ ಪ್ರಕಟವಾಗುತ್ತಿದೆ. ಈಗ ಬ್ಯಾಂಕಿಂಗ್ ಸೇವೆ ಕೂಡ ಬಳಕೆದಾರರ ಹಿತರಕ್ಷಣಾ ಅಧಿ ನಿಯಮದಡಿ (Consumer Protection Act) ಬರುತ್ತದೆ. ಗ್ರಾಹಕರು ಇದರ ನೆರವು ಪಡೆಯಲು ಮುಂದಾಗುತ್ತಿದ್ದಾರೆ. ಬಳಕೆದಾರ ಸೇವಾ ಕೇಂದ್ರಗಳ ಮೂಲಕ ಗ್ರಾಹಕ ದೂರುಗಳನ್ನು ಸ್ವೀಕರಿಸಿ ನಿರ್ದಿಷ್ಟ ಅವಧಿಯೊಳಗೆ ಪರಿಹಾರ ಒದಗಿಸುವ ಯೋಜನೆಯಿಂದ ಗ್ರಾಹಕರ ಕಣ್ಣೊರೆಸಲು ಸಾಧ್ಯವಾಗಬಹುದೇ ವಿನಾ ಗ್ರಾಹಕರು ಪೂರ್ಣ ತೃಪ್ತರಾಗುವರೆಂದು ನಂಬಲಾಗದು. ಆದರೆ ಬಳಕೆದಾರರ ಹಿತರಕ್ಷಣಾ ಅಧಿ ನಿಯಮದಡಿ ಬ್ಯಾಂಕುಗಳ ಅದಕ್ಷತೆಯನ್ನು ಬಯಲಿಗೆಳೆದ ಪ್ರಸಂಗಗಳೂ ಇವೆ. ಗ್ರಾಹಕರೊಬ್ಬರು ಲಾಕರ್ ಹೊಂದಿದ್ದು ಅದರಲ್ಲಿದ್ದ ಆಭರಣ ಕಳೆದದ್ದರಿಂದ ಬ್ಯಾಂಕೊಂದು ಒಂದು ಲಕ್ಷ ರೂ.ಗಳಿಗೂ ಮೀರಿ ಪರಿಹಾರ ನೀಡಬೇಕಾಯಿತು. ಚೆಕ್ ವಸೂಲಿಯಲ್ಲಿ ವಿಳಂಬವಾದುದಕ್ಕೆ ಇನ್ನೊಂದು ಬ್ಯಾಂಕ್ ರೂ. ೫೦೦೦ ದಂಡ ತೆತ್ತಿತು. ಡ್ರಾಫ್ಟ್‌ಗಳ ಪಾವತಿ, ಖಾತರಿ ಕ್ಲೇಮುಗಳ ಪಾವತಿಯಲ್ಲಿಯೂ ವಿವಾದಗಳು ಸಾಮಾನ್ಯ. ಬ್ಯಾಂಕುಗಳು, ಬ್ಯಾಂಕ್ ಉದ್ಯೋಗಿಗಳು ಇನ್ನಷ್ಟು ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸುವಂತೆ ಇಲ್ಲಿನ ತೀರ್ಪುಗಳು ಮಾಡಿವೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಗ್ರಾಹಕ ಸೇವೆ ಮೇಲುನೋಟಕ್ಕೆ ತೋರುವಷ್ಟು ಸರಳ ಪರಿಕಲ್ಪನೆಯಲ್ಲ ಎಂದು ಸಷ್ಟವಾಗಿ ತಿಳಿಯುತ್ತದೆ. ಕೇವಲ ಸುತ್ತೋಲೆಗಳಿಂದ, ಸಮಿತಿಗಳ ರಚನೆ ಮತ್ತು ಶಿಫಾರಸುಗಳಿಂದ ಅಥವಾ ಶಾಖಾ ಮಟ್ಟದ ಗ್ರಾಹಕ ಸೇವಾಸಭೆಗಳಿಂದ ಸಾಧಿತವಾಗುವುದು ಅತ್ಯಲ್ಪ. ಮೂಲಭೂತ ಸಮಸ್ಯೆಗಳತ್ತ ಗಮನಹರಿಸಬೇಕಾಗುತ್ತದೆ. ದಕ್ಷತೆಯ ಹೆಚ್ಚಳದಿಂದ ಗ್ರಾಹಕ ಸೇವೆ ಉತ್ತಮಗೊಳ್ಳುವುದೆಂಬುದು ನಿರ್ವಿವಾದ. ಆದರೆ ಅದರ ಅಭಾವ ಎಲ್ಲೆಲ್ಲೂ ಎದ್ದು ತೋರುತ್ತಿರುವ ಇಂದಿನ ದಿನಗಳಲ್ಲಿ ಬ್ಯಾಂಕುಗಳಲ್ಲಿ ಎಷ್ಟರ ಮಟ್ಟಿನ ಪ್ರಗತಿ ಸಾಧಿಸಲು ಸಾಧ್ಯವೆಂಬುದು ವಿಚಾರಾರ್ಹವಾಗುತ್ತದೆ.

ಸಿಬ್ಬಂದಿಯ ಕೊರತೆಯು ಕೆಲಸದ ಹೆಚ್ಚಳದಿಂದ ದಿನೇ ದಿನೇ ತೀವ್ರವಾಗುತ್ತಿದೆ ಎಂಬ ವಿಷಯವನ್ನು ಬ್ಯಾಂಕುಗಳ ಆಡಳಿತ ವರ್ಗಗಳೂ ಒಪ್ಪುತ್ತವೆ. ಆದರೆ ಲಾಭಪ್ರದತೆಯ ಕುಸಿತಕ್ಕೆ ಕಾರಣವೇನು ಎಂಬ ಚರ್ಚೆಗೆ ತೊಡಗುವುದು ಪಂಡೋರಳ ಪೆಟ್ಟಿಗೆಯನ್ನು ತೆಗೆಯುವಂತೆ. ಇಡೀ ಬ್ಯಾಂಕಿಂಗ್ ವ್ಯವಸ್ಥೆಯಲ್ಲೇ ಬದಲಾವಣೆಗಳು ಅನಿವಾರ್ಯವೆನ್ನಿಸಬಹುದು.

ಇಷ್ಟಾದರೂ ಸಿಬ್ಬಂದಿಯ ಮನೋಭಾವ ಕುರಿತ ಪ್ರಶ್ನೆಯನ್ನು ಸದಾ ತೆರೆದ ಮನದಿಂದ ನೋಡಲೇಬೇಕಾಗುತ್ತದೆ. ಗ್ರಾಹಕರ ಸಮಸ್ಯೆಗಳಿಗೆ ಸಾಧ್ಯವಾದಷ್ಟು ಸ್ಪಂದಿಸುವಂತೆ ಸಿಬ್ಬಂದಿಯ ಮನೋಭಾವ ಬದಲಾಗಬೇಕು. ಈ ನಿಟ್ಟಿನಲ್ಲಿ ಸಿಬ್ಬಂದಿ ತರಬೇತಿಗೆ ವ್ಯವಸ್ಥೆಯಿದೆಯಾದರೂ ಅಂಥ ತರಬೇತಿ ವ್ಯವಸ್ಥೆ ಇನ್ನಷ್ಟು ವ್ಯಾಪಕವೂ ಅರ್ಥಪೂರ್ಣವೂ ಆಗಬೇಕು. ಗ್ರಾಹಕರ ನಿರೀಕ್ಷೆಗಳನ್ನು ಅನಗತ್ಯವಾಗಿ ಏರಿಸಲಾಗುತ್ತಿದೆಯೆಂದು ಸಿಬ್ಬಂದಿ ವರ್ಗದ ದೂರು. ಪತ್ರಿಕಾ ಪ್ರಕಟಣೆಗಳು, ವೇದಿಕೆ ಮೇಲಿಂದ ಘೋಷಣೆಗಳು, ಮೇಲಧಿಕಾರಿಗಳ ಮತ್ತು ಮೇಲಿನ ಕಛೇರಿಗಳ ಮಿತಿಮೀರಿದ ಸಹಾನುಭೂತಿ ಶಾಖಾಮಟ್ಟದಲ್ಲಿ ತೊಡಕುಂಟುಮಾಡಲು ಸಾಧ್ಯ.

ಶಾಖೆಗಳ ಮತ್ತು ಸಿಬ್ಬಂದಿಯ ಸಾಮರ್ಥ್ಯದ ಇತಿಮಿತಿಗಳನ್ನು ಮೊದಲು ಮೇಲಿನವರು ಗಮನಿಸಬೇಕು. ಇಲ್ಲದಿದ್ದರೆ ವೃಥಾ ದೂರುಗಳನ್ನು ಆಹ್ವಾನಿಸಿದಂತಾಗುತ್ತದೆ.

ಈ ವಿಷಯದಲ್ಲಿ ಗ್ರಾಹಕರು ತಿಳಿಯುವುದು ಏನಾದರೂ ಇದೆಯೇ? ಎಂಬ ಪ್ರಶ್ನೆಯೂ ಏಳಬಹುದು. ಕೆಲ ದಶಕಗಳ ಹಿಂದೆ ಇದ್ದಂತೆ ತಾವು ಸಾರ್ವಭೌಮರಲ್ಲ ಎಂಬುದನ್ನಂತೂ ಇಂದಿನ ಸ್ಥಿತಿಯನ್ನೂ ಅದಕ್ಕೆ ಕಾರಣಗಳನ್ನೂ ವಿಶ್ಲೇಷಿಸಿ ಪರಿಸ್ಥಿತಿಗೆ ಹೊಂದಿಕೊಳ್ಳುವಂಥ ಮನೋಭಾವವನ್ನು ತೋರದಿರುವ ಗ್ರಾಹಕರೂ ಹೆಚ್ಚಿನ ಸಂಖ್ಯೆಯಲ್ಲೇ ಇದ್ದಾರೆ. ಬ್ಯಾಂಕುಗಳು ಇತರ ಸರಕಾರಿ ಕಚೇರಿಗಳಂತೆಯೇ ಆಗುತ್ತಿದೆ ಎಂದು ಅವರ ಕೊರಗು. ಇದನ್ನು ದೋಷವೆನ್ನುವಂತಿಲ್ಲ. ಆದರೆ ಗ್ರಾಹಕರ ಅತೃಪ್ತಿ, ಅಸಹನೆಗಳು ನಿಸ್ಸಹಾಯಕ ಸಿಬ್ಬಂದಿಯೊಂದಿಗೆ ಘರ್ಷಣೆಯಲ್ಲಿ ಪರ್ಯವಸಾನವಾದರೆ ಯಾರಿಗೂ ಪ್ರಯೋಜನವಿಲ್ಲ.

ತೀವ್ರವಾಗಿ ಏರುತ್ತಿರುವ ವ್ಯವಹಾರ ಗಾತ್ರದ ಹಿನ್ನೆಲೆಯಲ್ಲಿ ಸದ್ಯಕ್ಕೆ ಕಾಣುತ್ತಿರುವ ಪರಿಹಾರವೆಂದರೆ ಗಣಕೀಕರಣ. ಇಲ್ಲಿಯೂ ಬ್ಯಾಂಕುಗಳಿಗೆ ಕೆಲವು ತೊಡಕುಗಳಿವೆಯಾದರೂ ಗಣಕೀಕರಣದ ಹಾದಿಯಲ್ಲಿ ಬ್ಯಾಂಕುಗಳು ಹೆಜ್ಜೆಯಿಡುತ್ತಿವೆ. ಶೀಘ್ರ ಗಣಕೀಕರಣದಿಂದ ಸೇವೆಯಲ್ಲಿ ದಕ್ಷತೆಯನ್ನು ಸಾಧಿಸಬಹುದು. ಆದರೆ ಸೇವೆಗೆ ಸೌಜನ್ಯವನ್ನೂ ಸೇರಿಸುವುದನ್ನು ಸಿಬ್ಬಂದಿ ಅಭ್ಯಾಸ ಮಾಡಿಕೊಳ್ಳುವುದು ಅನಿವಾರ್ಯ, ಏಕೆಂದರೆ ಗಣಕಗಳಿಗೆ ನಗುವುದನ್ನು ಇನ್ನೂ ಕಲಿಸಲು ಸಾಧ್ಯವಾಗಿಲ್ಲ. ●

*ಬ್ಯಾಂಕಿಂಗ್ ಪ್ರಪಂಚ – ಡಿಸೆಂಬರ್ ೧೯೯೧*

# ಬೋಧನೆಯ ಕ್ಷೇತ್ರದಲ್ಲಿ ಕನ್ನಡ

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

೧೯೯೦ ಸೆಪ್ಟೆಂಬರ್ ೨೮, ೨೯, ಮತ್ತು ೩೦ ರಂದು ಬೆಂಗಳೂರಿನಲ್ಲಿ ನಡೆದ ಬ್ಯಾಂಕಿಂಗ್ ಕಮ್ಮಟದ ನೂರನೆಯ ದಿನದ ಹಬ್ಬದ ಸಂದರ್ಭದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಒಂದು ಪ್ರಬಂಧ.

ಭಾರತೀಯ ಸ್ಟೇಟ್ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿಯವರು ಬೋಧನೆಯ ಕ್ಷೇತ್ರದಲ್ಲಿ ಕನ್ನಡ ಕುರಿತು ಪ್ರಬಂಧ ಮಂಡಿಸಿ ಎಂದು ಹೇಳಿದುದರಿಂದ ಅವರ ವಿಶ್ವಾಸಕ್ಕೆ, ಪ್ರೀತಿ ವಾತ್ಸಲ್ಯಗಳಿಗೆ ಮಣಿದು ಈ ಪ್ರಬಂಧ ನಿಮ್ಮ ಮುಂದಿಡುತ್ತಿದ್ದೇನೆ. ಕಳೆದ ಇಪ್ಪತ್ತೈದು ವರ್ಷಗಳಿಂದ ವಾಣಿಜ್ಯ ಶಾಸ್ತ್ರದ ಅಧ್ಯಾಪಕನಾಗಿರುವ ಕಾರಣದಿಂದ, ಈಚಿನ ಹಲವು ವರ್ಷಗಳಿಂದ ಬಿ.ಕಾಂ. ತರಗತಿಗಳಿಗೆ ಕನ್ನಡ ಮಾಧ್ಯಮದಲ್ಲಿ ಬೋಧಿಸುತ್ತಿರುವ ಅನುಭವದಿಂದ, ವಾಣಿಜ್ಯ ಶಾಸ್ತ್ರ ವಿಷಯಗಳನ್ನು ಕುರಿತು ಕನ್ನಡದಲ್ಲಿ ಒಂದೆರಡು ಪುಸ್ತಕಗಳು ಹಾಗೂ ಕೆಲವು ಲೇಖನಗಳನ್ನು ಬರೆದಿರುವುದರಿಂದ ಬ್ಯಾಂಕಿನ ಕ್ಷೇತ್ರದಲ್ಲಿನ ತಜ್ಞರೂ, ಅನುಭವಿಗಳೂ ಆದ ನಿಮ್ಮೊಡನೆ ವಿಚಾರ ವಿನಿಮಯ ಮಾಡಿಕೊಳ್ಳಲು ಈ ಪ್ರಬಂಧ ಮಂಡಿಸುತ್ತಿದ್ದೇನೆ. ಇದರಲ್ಲಿರುವ ವಿಚಾರಗಳು, ಅಭಿಪ್ರಾಯಗಳು ಶೇ. ೧೦೦ ನನ್ನವೇ ಎಂದು ಹೇಳಿಕೊಳ್ಳುವ ಧಾರ್ಷ್ಟ್ಯವಿಲ್ಲ. ವಿಚಾರವಂತರು, ಪ್ರಾಜ್ಞರು, ಅನುಭವಿಗಳು, ಭಾಷಾ ವಿಶಾರದರು, ಶಿಕ್ಷಣ ತಜ್ಞರು – ಹೀಗೆ ಅನೇಕರ ವಿಚಾರಗಳನ್ನು ಸಮೀಕರಿಸುವ ಕೆಲಸ ಮಾಡಿದ್ದೇನೆ. ಬೋಧನೆಯ ಕನ್ನಡದ ಬಗ್ಗೆ ಹೇಳುವಾಗ ವಿಜ್ಞಾನ, ಮಾನವಿಕ ಮತ್ತು ವಾಣಿಜ್ಯ ವಿಷಯಗಳೆಲ್ಲದರ ಬಗ್ಗೆ ಹೇಳುವುದು ಪ್ರಬಂಧವನ್ನು ಅತಿ ವಿಸ್ತಾರಗೊಳಿಸುವುದೆಂಬ ಭಯದಿಂದ ಇದರ ವ್ಯಾಪ್ತಿಯಲ್ಲಿ ವಾಣಿಜ್ಯ ವಿಷಯಗಳನ್ನಷ್ಟೇ ಪ್ರಸ್ತಾಪಿಸಿದ್ದೇನೆ. ಇವುಗಳ ಬೋಧನೆಗೆ ಸಂಬಂಧಿಸಿದಂತೆ ಕೆಲವು ವಿಚಾರಗಳನ್ನು ನನ್ನ ಅನುಭವಕ್ಕೆ ಬಂದಂತೆ, ನಾನು ಸಹಅಧ್ಯಾಪಕರಿಂದ ಕೇಳಿದಂತೆ ಪ್ರಸ್ತಾಪಿಸಿದ್ದೇನೆ.

## ಭಾಷೆಯ ಸಮಸ್ಯೆ

ಶಿಕ್ಷಣ ಕ್ಷೇತ್ರದ ಸಮಸ್ಯೆಗಳಲ್ಲಿ ತುಂಬ ಮಹತ್ವದ್ದು ಭಾಷೆಗಳನ್ನು ಕುರಿತಾದ್ದು. ಎಲ್ಲ ಶಿಕ್ಷಣದ ತಿರುಳು ಅರಿವು ಮತ್ತು ಅಭಿವ್ಯಕ್ತಿ. ಇದು ಸಾಧ್ಯವಾಗುವುದು ಭಾಷೆಯ ಮೂಲಕ. ಆದ್ದರಿಂದ ಶಿಕ್ಷಣದ ಯಶಸ್ಸೆಲ್ಲ ಅದರ ಮಾಧ್ಯಮವನ್ನೇ ಅವಲಂಬಿಸಿರುತ್ತದೆ ಎಂದರೆ ತಪ್ಪಾಗಲಾರದು. ಬೋಧನೆಯ ಕನ್ನಡ ಕುರಿತು ವಿಚಾರ ಮಾಡುವಾಗ ಶಿಕ್ಷಣ ಮಾಧ್ಯಮದ ವಿಷಯ ಅನಿವಾರ್ಯವಾಗಿ ಹೇಳಬೇಕಾಗುತ್ತದೆ. ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕೆಂದಿರುವ ಅನೇಕರ ಅಭಿಪ್ರಾಯಗಳನ್ನು ನಾವು ನೋಡಬಹುದು. ಹೀಗೆಂದವರು ಮಾತೃಭಾಷೆಯ ಅಂಧ ಅಭಿಮಾನಿಗಳಲ್ಲ. ಅವರು ದೇಶಪ್ರೇಮಿಗಳು, ವಿಚಾರವಂತರು, ಶಿಕ್ಷಣ ತಜ್ಞರು, ದೇಶದ ಭವಿಷ್ಯದ ಬಗ್ಗೆ ನಿಸ್ಪೃಹ ಕಾಳಜಿಯುಳ್ಳವರು. ಮಾತೃಭಾಷೆಯ ಮೂಲಕ ಮಕ್ಕಳ ಜ್ಞಾನಕೋಶ ಭಾವಕೋಶಗಳು ಅರಳುವಂತೆ ಅನ್ಯಭಾಷೆಯ ಮೂಲಕ ಸಾಧ್ಯವಿಲ್ಲವೆಂಬ ತತ್ತ್ವ ಪ್ರಪಂಚದ ಹಿರಿಯ ವಿದ್ವಾಂಸರ, ಚಿಂತಕರ ಮನ್ನಣೆ ಪಡೆದಿದೆ. ಅಷ್ಟೇ ಅಲ್ಲ, ಅದು ಸಾಮಾನ್ಯ ಜನರ ನಿತ್ಯಾನುಭವದ ಸಂಗತಿಯೂ ಆಗಿದೆ.

## ಮಾತೃಭಾಷೆ

ಮಹಾತ್ಮ ಗಾಂಧಿಯವರ ಅಭಿಪ್ರಾಯದಲ್ಲಿ ಮನುಷ್ಯನ ಬುದ್ಧಿಯ ಬೆಳವಣಿಗೆಗೆ ಮಾತೃಭಾಷೆ ಅವಶ್ಯಕ. ದೇಶದ ಮಕ್ಕಳ ಬುದ್ಧಿಯ ಬೆಳವಣಿಗೆಗೆ ಮಾತೃಭಾಷೆಯ ಹೊರತು ಬೇರೆ ಭಾಷೆಯನ್ನು ಬಲಾತ್ಕರಿಸುವುದು ಮಾತೃಭಾಷೆಗೆ ದ್ರೋಹ ಬಗೆದಂತೆ. ಶಿಕ್ಷಣ ಮಾಧ್ಯಮ ಯಾವುದಾಗಬೇಕೆಂಬುದನ್ನು ವಿದ್ವಾಂಸರಿಗೆ ಬಿಡಬಾರದು. ಇಂಗ್ಲೀಷನ್ನು ಉಳಿಸಿಕೊಳ್ಳಲಿಚ್ಛಿಸುವ ಈ ವಿದ್ವಾಂಸರು ಭಾಷೆಗಳನ್ನು ಧ್ವಂಸ ಮಾಡುತ್ತಾರೆ.

ಮಾತೃಭಾಷೆಯ ಮೂಲಕವೇ ವಿದ್ಯಾಭ್ಯಾಸ ನಡೆಸದಿದ್ದರೆ ರಾಷ್ಟ್ರದ ಪ್ರಗತಿಗೆ ಬಹುಮಟ್ಟಿಗೆ ಅಡಚಣೆಯುಂಟಾಗುತ್ತದೆ. ಹೀಗೆಂದವರು ಡಾ. ರಾಜೇಂದ್ರಪ್ರಸಾದ್, ಡಾ. ರಾಧಾಕೃಷ್ಣನ್, ಶ್ರೀ ಅಮರನಾಥ ಝಾ ಮುಂತಾದವರು ದೇಶಭಾಷಾ ಮಾಧ್ಯಮದ ಪರವಾಗಿ ವಾದಿಸಿದ್ದಾರೆ. ಜಪಾನ್, ಜರ್ಮನಿ, ಚೀಣಾ ದೇಶಗಳ ತೀವ್ರ ಪ್ರಗತಿಗೆ ಅಲ್ಲಿಯ ಸ್ವಭಾವಸಿದ್ಧವಾದ ವಿದ್ಯಾಭ್ಯಾಸ ಪದ್ಧತಿಯೇ ಕಾರಣ. ಪರದೇಶಗಳಲ್ಲಿ, ಮುಖ್ಯವಾಗಿ ಯೂರೋಪ್ ದೇಶದಲ್ಲಿನ ವಿದ್ಯಾರ್ಥಿಗಳಿಗೆ ಅವರ ಮಾತೃಭಾಷೆಯ ಮೂಲಕ ವಿದ್ಯಾಭ್ಯಾಸ

ಮಾಡಿಸುವುದರಿಂದ ಕಷ್ಟಕರವಾದ ಪಾಠಗಳನ್ನು ಸುಲಭವಾಗಿ ಅರ್ಥ ಮಾಡಿಕೊಂಡು ಪ್ರಥಮ ವರ್ಗದ ವಿಜ್ಞಾನಿಗಳಾಗಲು ಸಹಕಾರಿಯಾಗಿದೆ ಎಂದು ಶಿಕ್ಷಣ ತಜ್ಞ ಡಾ. ಜಗಪತಿನಾಯ್ಡು ಹೇಳಿದ್ದಾರೆ. ಅಣ್ಣಾಮಲೈ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗದ್ದ ಶ್ರೀ ಷಣ್ಮುಗಂ ಚೆಟ್ಟಿಯಾರರ ಅಭಿಪ್ರಾಯದಲ್ಲಿ ವಿದ್ಯಾಭ್ಯಾಸ ಪ್ರಯೋಜನಕಾರಿಯೂ ವಾಸ್ತವವೂ ಆಗಬೇಕಾದರೆ ಪ್ರಾಥಮಿಕ ದರ್ಜೆಯಿಂದ ವಿಶ್ವವಿದ್ಯಾನಿಲಯದವರೆಗೆ ಮಾತೃಭಾಷೆಯಲ್ಲಿಯೇ ನಡೆಯಬೇಕು. ಕಾಲು ಶತಮಾನಕ್ಕೂ ಹೆಚ್ಚು ಕಾಲ ವಾಣಿಜ್ಯ ವಿಷಯಗಳನ್ನು ಬೋಧಿಸಿದ ಪ್ರೊ. ಎಚ್ಚೆಸ್ಕೆಯವರ ಮಾತುಗಳನ್ನು ಉದ್ಧರಿಸುವುದಾದರೆ ಇಂಗ್ಲೀಷಿನಲ್ಲಿ ಪಾಠ ಹೇಳುತ್ತ ಥಟ್ಟನೆ ಕನ್ನಡದಲ್ಲಿ ಅದನ್ನು ವಿದ್ಯಾರ್ಥಿಗಳ ಮಸ್ತಕಕ್ಕೆ ಇಟ್ಟಾಗ ಇಡೀ ತರಗತಿಯೇ ಸುಂದರ ಸ್ವಪ್ನವೊಂದನ್ನು ಕಂಡಂತೆ ಪುಳಕಿತವಾದುದನ್ನು ನಾನು ನೋಡಿದ್ದೇನೆ. ತಾಯಿನುಡಿ ಶಿಕ್ಷಣ ಮಾಧ್ಯಮವಾಗಿರುವುದರ ಬಗ್ಗೆ ಅನುಭವದ ಈ ಮಾತುಗಳು ಉತ್ಪ್ರೇಕ್ಷೆಯಾಗಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಒಂದು ವಿಷಯ ನಮಗೆ ಸ್ಪಷ್ಟವಾಗಬೇಕು. ಅದೆಂದರೆ, ಇಂಗ್ಲೀಷ್ ಮಾಧ್ಯಮ ಬೇಡವೆನ್ನುವುದು ಮತ್ತು ಇಂಗ್ಲೀಷ್ ಭಾಷೆಯನ್ನು ಕಲಿಯುವುದು ಬೇರೆ ಬೇರೆ ವಿಚಾರ.

ಕಲಿಕೆ ಎನ್ನುವುದು ನಮ್ಮ ಸ್ವಂತ ಭಾಷೆಯಲ್ಲಿರಬೇಕು. ಯಾವುದೇ ವಿಷಯವನ್ನಾದರೂ ಅರ್ಥಶಾಸ್ತ್ರ, ವಾಣಿಜ್ಯ ಶಾಸ್ತ್ರ, ಭೌತಶಾಸ್ತ್ರ ಇತ್ಯಾದಿ ಸುಲಭ. ಉದಾಹರಣೆಗೆ ಇಂಗ್ಲೀಷಿನ ಮೂಲಕ ವಾಣಿಜ್ಯ ಶಾಸ್ತ್ರವನ್ನು ಕಲಿಯುವಾಗ ವಿದ್ಯಾರ್ಥಿಯ ಶಕ್ತಿಯೆಲ್ಲಾ ಭಾಷೆಯನ್ನು ಗ್ರಹಿಸುವುದರಲ್ಲೇ ವ್ಯಯವಾಗಿ ಹೋಗುತ್ತದೆ. ತನಗೆ ಹೆಚ್ಚು ಪರಿಚಯವಿರದ ಭಾಷೆಯ ಬೇಲಿಯನ್ನು ದಾಟ ವಾಣಿಜ್ಯ ಶಾಸ್ತ್ರ ತಲುಪುವ ವೇಳೆಗೆ ಅವನಿಗೆ ಇಂಗ್ಲೀಷು, ವಾಣಿಜ್ಯ ಶಾಸ್ತ್ರ ಎರಡೂ ಬೇಡವಾಗುತ್ತವೆ. ನಮ್ಮ ಭಾಷೆಯಲ್ಲಿ ಹೇಳುವಾಗ ಬೋಧಕ ಬಳಸುವ ಪದಗಳು, ನುಡಿಗಟ್ಟುಗಳು, ಗಾದೆ ಮಾತುಗಳು ಕೇಳುವ ವಿದ್ಯಾರ್ಥಿಗೆ ಪರಿಚಿತವಾಗಿರುವಂತಹವು. ಅದನ್ನು ಗ್ರಹಿಸುವುದು ಅವನಿಗೆ ಸುಲಭ, ಸರಳ ನೇರ. ಉದಾಹರಣೆಗೆ ತನ್ನ ಗ್ರಾಹಕನೊಬ್ಬನ ಚೆಕ್ಕನ್ನು ಸಾಕಷ್ಟು ಕಾರಣವಿಲ್ಲದೆ ಬ್ಯಾಂಕರನು ಅನಾದರಿಸಿದಾಗ, ಅವನು ತುಂಬಿಕೊಡಬೇಕಾದ ನಷ್ಟ ಚೆಕ್ಕಿನ ಮೊಬಲಗನ್ನು ಮಾತ್ರ ಆಧರಿಸಿಲ್ಲ. ಅದಕ್ಕಿಂತ ಹೆಚ್ಚಾಗಿ ಅವನ ಸುನಾಮಕ್ಕೆ ಉಂಟಾದ ಧಕ್ಕೆಯನ್ನು ಪರಿಗಣಿಸಲಾಗುವುದು ಎಂದು ಹೇಳುವಾಗ ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು ಎಂಬ ಗಾದೆಯ ಬಳಕೆ ಬ್ಯಾಂಕರನ ಜವಾಬ್ದಾರಿಯನ್ನು ಸ್ಪಷ್ಟಪಡಿಸುತ್ತದೆ.

### ದೊಂಬರಾಟ ಸಾಧ್ಯವಿಲ್ಲ

ನಮ್ಮ ಶಿಕ್ಷಣ ವ್ಯವಸ್ಥೆ ಕ್ರಿಯಾತ್ಮಕವಾಗಿಲ್ಲದಿರುವುದಕ್ಕೆ, ನಮ್ಮ ವಿದ್ಯಾವಂತರು ಜನಸಾಮಾನ್ಯರಿಂದ ದೂರವಾಗಿರುವುದಕ್ಕೆ ಅನ್ಯಭಾಷಾ ಮಾಧ್ಯಮವೇ ಕಾರಣ ಎಂದು ಖ್ಯಾತ ಗಾಂಧೀವಾದಿ ಶ್ರೀಮನ್ನಾರಾಯಣ ಹೇಳಿದ್ದಾರೆ. ವಿದೇಶಿ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿರುವವರಿಗೆ ಬೋಧನೆಯ ಗುಣಮಟ್ಟವನ್ನು ಹೆಚ್ಚಿಸಬೇಕೆಂಬ ಉದ್ದೇಶ ಸಫಲವಾಗುವುದಿಲ್ಲ ಎನ್ನುವುದು ಅನುಭವಿಗಳನೇಕರ ಅಭಿಪ್ರಾಯ. ತರಗತಿಯಲ್ಲಿ ವಿದೇಶಿ ಭಾಷೆ ಬೋಧಿಸುವಾಗ, ಭಾಷೆಯ ಮೊರೆ ಹೊಕ್ಕು ವಿದ್ಯಾರ್ಥಿಗಳಿಗೆ ಅರ್ಥವಾಗದ ಪದಗಳನ್ನು ಬಳಸಿ ಅಧ್ಯಾಪಕ ತನ್ನ ಮರ್ಯಾದೆ ಕಾಪಾಡಿಕೊಳ್ಳುತ್ತಾನೆ. ಭಾಷೆ ಅವನಿಗೆ ಗುರಾಣಿಯಾಗುತ್ತದೆ. ಆದರೆ ಕನ್ನಡದಲ್ಲೇ ಪಾಠ ಹೇಳುತ್ತಿರುವ ಅಧ್ಯಾಪಕನಿಂದ ಈ ದೊಂಬರಾಟ ಸಾಧ್ಯವಿಲ್ಲ. ಅವನ ಸರಕು ಮುಗಿದಿದ್ದು ವಿದ್ಯಾರ್ಥಿಗಳಿಗೆ ಕೂಡಲೇ ತಿಳಿಯುತ್ತದೆ. ಅಧ್ಯಾಪಕ ವಿಷಯಾಂತರ ಮಾಡುತ್ತಿರುವುದನ್ನು ಅವರು ಗಮನಿಸುತ್ತಾರೆ. ಆದ್ದರಿಂದ ತಾಯ್ನುಡಿಯಲ್ಲಿ ಶಿಕ್ಷಣದಿಂದ ಬೋಧಕರು ಬೋಧನೆಯ ಕಾರ್ಯವನ್ನು ಹೆಚ್ಚು ಗಂಭೀರವಾಗಿ ತೆಗೆದುಕೊಳ್ಳುವುದಕ್ಕೆ ನೆರವಾಗುತ್ತದೆ.

### ಸಾರ್ಥಕ ಶಿಕ್ಷಣ

ಅಧ್ಯಾಪಕನಾಗಿ ನಾನು ಗಮನಿಸಿರುವ ಮತ್ತೊಂದು ವಿಷಯವೆಂದರೆ ಕನ್ನಡ ಮಾಧ್ಯಮದ ತರಗತಿಗಳಲ್ಲಿ ವಿದ್ಯಾರ್ಥಿಗಳು ಅಧ್ಯಾಪಕರಿಗೆ ಧೈರ್ಯವಾಗಿ ಪ್ರಶ್ನೆಗಳನ್ನು ಹಾಕುತ್ತಾರೆ. ಅವರಿಗೆ ತೃಪ್ತಿಯಾಗುವಂತಹ ಉತ್ತರವನ್ನು ನಿರೀಕ್ಷಿಸುತ್ತಾರೆ. ದೊರೆತ ಉತ್ತರ ಸಮರ್ಪಕವಾಗಿಲ್ಲದಿದ್ದಲ್ಲಿ ವಾದ ಮಾಡುತ್ತಾರೆ. ಹೀಗಾಗಿ ಕನ್ನಡ ಮಾಧ್ಯಮದ ತರಗತಿಗಳು ದ್ವಿಮುಖವಾಗಿರುತ್ತವೆ. ಅಲ್ಲದೆ ಈ ತರಗತಿಗಳಲ್ಲಿ ಟಿಪ್ಪಣಿಗಳನ್ನು ಬರೆಸುವ ಕೆಲಸವಿರುವುದಿಲ್ಲ. ಇಂಗ್ಲೀಷ್ ಮಾಧ್ಯಮದ ತರಗತಿಗಳಲ್ಲಿ, ಅದರಲ್ಲೂ ಕೇವಲ ಸೈದ್ಧಾಂತಿಕ ವಿಷಯಗಳ ತರಗತಿಗಳಲ್ಲಿ ಬೋಧಕ ಉಪನ್ಯಾಸ ಮಾಡುವಾಗ ವಿದ್ಯಾರ್ಥಿಗಳು ಅದರ ಕಡೆ ಹೆಚ್ಚು ಗಮನ ಕೊಡದೆ ಕೇವಲ ನೋಟ್ಸ್‌ಗಾಗಿ ಕಾದು ಕುಳಿತಿರುವುದು ವ್ಯಕ್ತವಾಗುತ್ತದೆ. ಬರೆಸಿದ ನೋಟ್ಸನ್ನು ಓದಿ ವಿಷಯ ತಿಳಿಯುವುದರ ಬದಲು ನೋಟ್ಸನ್ನ ಉರು ಹಚ್ಚುವ ಪ್ರವೃತ್ತಿ ಕಾಣುತ್ತದೆ. ಕನ್ನಡ ಮಾಧ್ಯಮದ ವಿದ್ಯಾರ್ಥಿ ತನ್ನ ಭಾಷೆಯಲ್ಲಿ ಚೆನ್ನಾಗಿ ಅಭಿವ್ಯಕ್ತಿಸುವುದು ಅವನು ಪರೀಕ್ಷೆಗಳಲ್ಲಿ ಬರೆದ ಉತ್ತರಗಳಲ್ಲಿ ಕಾಣುತ್ತದೆ. ಇಂಗ್ಲೀಷ್ ಉತ್ತರ ಪತ್ರಿಕೆಗಳಲ್ಲಿ ಇಂಗ್ಲೀಷ್ ಇರುವುದಿಲ್ಲ. ವಿಷಯವೂ ಇರುವುದಿಲ್ಲ.

### ಮಾಧ್ಯಮದ ಉದ್ದೇಶ

ಶಿಕ್ಷಣ ತಜ್ಞರ ಅಭಿಪ್ರಾಯದಲ್ಲಿ ಶಿಕ್ಷಣ ಮಾಧ್ಯಮವಾಗುವ ಭಾಷೆ ಮೂರು ಉದ್ದೇಶಗಳನ್ನು ಪೂರೈಸಬೇಕು. ಸುಲಭವಾಗಿ ಜ್ಞಾನ ಪಡೆಯುವುದು ಮೊದಲನೆಯದು. ಕನ್ನಡದಲ್ಲಿ ಪಾಠ ಕೇಳಿದ ವಿದ್ಯಾರ್ಥಿ ವಿಷಯ ಗ್ರಹಿಸುವುದರಲ್ಲಿ ಇತರರಿಗಿಂತ ಚುರುಕಾಗಿರುವುದು ನನ್ನ ಅನುಭವಕ್ಕೆ ಬಂದಿದೆ. ವಿಷಯ ನಿರೂಪಣೆ ಮಾಡುವಾಗ, ಟಿಪ್ಪಣಿ ನೀಡುವಾಗ, ವಿದ್ಯಾರ್ಥಿ ಅದನ್ನು

ಸುಲಭವಾಗಿ ಗ್ರಹಿಸುತ್ತಾನೆ. ತಾಂತ್ರಿಕ ಅಥವಾ ಪಾರಿಭಾಷಿಕ ಪದಗಳ ಬಗ್ಗೆ ಕುತೂಹಲ ವ್ಯಕ್ತಪಡಿಸುತ್ತಾನೆ. ಪರಕ್ರಾಮ್ಯ ಸಂಲೇಖಗಳ ಬಗ್ಗೆ ಹೇಳುವಾಗ ಪರಕ್ರಾಮ್ಯ ಪದದ ಅರ್ಥ ಆಗುವಷ್ಟು ಸುಲಭವಾಗಿ, ಶೀಘ್ರವಾಗಿ ಅವನಿಗೆ negotiation ಪದ ಆಗುವುದಿಲ್ಲ. ಲೆಕ್ಕ ಶಾಸ್ತ್ರದ ತರಗತಿಯಲ್ಲಿ ಲೆಕ್ಕಗಳನ್ನು ಋಣಿಸುವ ಧನಿಸುವ ನಿಯಮಗಳನ್ನು ಅವನಿಗೆ ಕನ್ನಡದಲ್ಲಿ ವಿವರಿಸುವಾಗ ಅವನು ಅದಕ್ಕೆ ಇತ್ಯಾತ್ಮಕವಾಗಿ ಪ್ರತಿಕ್ರಿಯಿಸುತ್ತಾನೆ.

ಶಿಕ್ಷಣ ಮಾಧ್ಯಮವಾಗುವ ಭಾಷೆ ಪೂರೈಸಬೇಕಾದ ಎರಡನೇ ಉದ್ದೇಶ ಖಚಿತವಾಗಿ ಭಾವನೆಗಳನ್ನು ವ್ಯಕ್ತಪಡಿಸುವುದು. ಶಾಸ್ತ್ರ ವಿಷಯಗಳ ಕೆಲವು ಪರಿಕಲ್ಪನೆಗಳ ವ್ಯಾಖ್ಯೆ ನೀಡುವಾಗ ಈ ಖಚಿತತೆ ಹೆಚ್ಚು ಅಗತ್ಯವಾಗುತ್ತದೆ. ವಿಷಯಗಳ ವಿವರಣೆ ನೀಡುವಾಗ ಖಚಿತತೆ ಇಲ್ಲದಿದ್ದಲ್ಲಿ ಶಬ್ದಗಳ ಅಪವ್ಯಯವಾಗುತ್ತದೆ. ಕನ್ನಡದಲ್ಲಿರುವ ಶಬ್ದಸಂಪತ್ತು ಈ ಉದ್ದೇಶ ಸಾಧನೆಗೆ ನೆರವಾಗುತ್ತದೆ. ವ್ಯಾವಹಾರಿಕ ಜಗತ್ತಿನಲ್ಲಿ ಬಳಸುವ ಕನ್ನಡದಲ್ಲಿ ಬೇರೆ ಬೇರೆ ಭಾಷೆಗಳಿಂದ ಎರವಲು ಪಡೆದಿರುವ, ರೂಪಾಂತರಗೊಂಡಿರುವ ಪದಗಳು ಸಾಕಷ್ಟಿವೆ. ಬೇರೆ ಭಾಷೆಗಳಿಂದ ಬಂದಿದ್ದರೂ ಅನೇಕ ಪದಗಳು ಕನ್ನಡದವೇ ಆಗಿಬಿಟ್ಟಿವೆ. ಉ ಕಾರ ಸೇರಿಸುವ ಮೂಲಕ ಇಸು ಪ್ರತ್ಯಯಗಳನ್ನು ಬಳಸುವ ಮೂಲಕ ಚಾಲನೆಗೆ ಬಿಟ್ಟಿರುವ ಪದಗಳು ಹೆಚ್ಚು ಅರ್ಥವತ್ತಾಗಿ ಖಚಿತವಾಗಿ ಬಳಕೆಯಾಗುತ್ತವೆ. ಉದಾ ಬ್ಯಾಂಕು, ಚೆಕ್ಕು, ಪಾಸ್ ಪುಸ್ತಕ, ಪರಕ್ರಾಮ್ಯ ಸಂಲೇಖ, ಷೇರುವ ಬೋನಸ್, ಡ್ರಾಫ್ಟ್, ವೋಚರು, ಇತ್ಯಾದಿ.

ಶಕ್ತಿಪೂರ್ಣವಾಗಿ ಆಲೋಚನೆ ಮಾಡಲು ಸಹಾಯಕ-ವಾಗುವುದು ಶಿಕ್ಷಣ ಮಾಧ್ಯಮವಾಗುವ ಭಾಷೆ ಪೂರೈಸಬೇಕಾದ ಮೂರನೇ ಉದ್ದೇಶ. ನಾವು ಹೇಳಬೇಕಾದ ವಿಷಯಗಳನ್ನು ವಿವರಿಸಬೇಕಾದ ಅಂಶಗಳನ್ನು ಕುರಿತು ಕನ್ನಡದಲ್ಲಿ ಆಲೋಚನೆ ಮಾಡುವುದು ಸಾಧ್ಯವೆಂಬುದು ಕನ್ನಡದಲ್ಲಿ ಬೋಧಿಸುವವರ ಅನುಭವಕ್ಕೆ ಬಂದಿದೆ. ಕನ್ನಡದಲೇ ಆಲೋಚಿಸಿ ಶಾಸ್ತ್ರ ವಿಷಯಗಳನ್ನು ವಿವರಿಸಿ ಬರೆಯುವವರ ಅನುಭವ ಇದಕ್ಕೆ ಸಾಕ್ಷಿ. ಕ್ಲಿಷ್ಟ ವಿಷಯಗಳನ್ನು ವಿವರಿಸಲು ನಮಗೆ ಹತ್ತಿರವಾದ ಪರಿಸರದಿಂದ ಆಯ್ದ ಉದಾಹರಣೆಗಳನ್ನು ಕೊಡುವಾಗ ವಿದ್ಯಾರ್ಥಿಗಳ ಮಸ್ತಕಕ್ಕೆ ವಿಷಯ ಸುಲಭವಾಗಿ ಪ್ರವೇಶಿಸುತ್ತದೆ. ಉದಾಹರಣೆಗೆ: ಪ್ರೊ. ಎಚ್ಚೆಸ್ಕೆಯವರು ಬಯಕೆಗಳ ಪೂರೈಕೆ ಬಗ್ಗೆ ಕೂಡುವ ವಿವರಣೆಯನ್ನು ನೋಡಬಹುದು. "ಸುಡುಬೇಸಗೆಯ ನಡುಹಗಲಿನಲ್ಲಿ ನಿಮಗೆ ಮಂಜುಕೆನೆ ತಿನ್ನಬೇಕೆಂಬ ಬಯಕೆ ಉಂಟಾಯಿತೆನ್ನಿ. ಬಯಕೆ ಬಂದ ಒಡನೆಯೇ ನೀವು ಹತ್ತಿರದ ಅಂಗಡಿಯೊಂದಕ್ಕೆ ಹೋಗಿ ಅದನ್ನು ಕೊಳ್ಳಬಹುದು. ಅಥವಾ ಬಿರುಬಿಸಲಿನ ಆ ಸಮಯದಲ್ಲಿ ಅದು ನಿಮಗೆ ಬೇಕೆನಿಸುವುದನ್ನು ನಿರೀಕ್ಷಿಸಿ ಸಾಹಸಿ ಮಾರಾಟಗಾರನೊಬ್ಬ ಶೀತಕ ವ್ಯವಸ್ಥೆ ಇರುವ ಪೆಟ್ಟಿಗೆಯ ಬಂಡಿಯೊಂದರಲ್ಲಿ ಅದನ್ನಿಟ್ಟು ನಿಮ್ಮ ಮನೆಬಾಗಲಿಗೆ ಮಾರಲು ತರಬಹುದು. ಕ್ಷಣಾರ್ಧದಲ್ಲಿ ನಿಮ್ಮ ಬಯಕೆ ಈಡೇರುತ್ತದೆ. ಬಯಕೆ, ಅದರ ಪೂರೈಕೆ ಇದು ಮಾನವನ ಚಟುವಟಿಕೆಗಳ ಕೊನೆಮೊದಲಿಲ್ಲದ ಚಕ್ರ". ನಾಲ್ಕಾರು ವಾಕ್ಯಗಳಲ್ಲಿ ಅರ್ಥಶಾಸ್ತ್ರದ ತಿರುಳನ್ನು ಅಡಕಗೊಳಿಸಿದ್ದಾರೆ. ಕನ್ನಡದಲ್ಲೇ ಆಲೋಚಿಸಿ ಬರೆಯುವುದರ ಫಲ ಇದು. ಇಂತಹ ಉದಾಹರಣೆಗಳು ನಮಗೆ ಸಾಕಷ್ಟು ಸಿಗುತ್ತವೆ ಎಂದಾಗ ಶಕ್ತಿಪೂರ್ಣವಾಗಿ ಆಲೋಚಿಸಲು ಕನ್ನಡದಲ್ಲಿ ಸಾಧ್ಯ ಎಂಬುದು ಅನುಭವದ ಮಾತಾಗುತ್ತದೆ.

ಈ ಪ್ರಪಂಚದ ಪ್ರಾಚೀನ ಭಾಷೆಗಳಲ್ಲಿ ಕನ್ನಡವೂ ಒಂದು. ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವುಳ್ಳದ್ದು. ಬೇರೆ ಬೇರೆ ಭಾಷೆಗಳ ಸಂಪರ್ಕದಿಂದ ಅದು ಸಶಕ್ತವಾಗಿ ವಿಕಾಸಗೊಂಡಿದೆ. ಶಿಕ್ಷಣ ಮಾಧ್ಯಮವಾಗಲು ಎಲ್ಲ ಅರ್ಹತೆಗಳೂ ಅದಕ್ಕಿದೆ. ಮೊದಲಿನಿಂದಲೂ ಅತಿ ಮಡಿವಂತಿಕೆಯ ದೋಷಕ್ಕೊಳ-ಗಾಗದೆ ಸಂಸ್ಕೃತ, ಪ್ರಾಕೃತ, ಉರ್ದು, ಪರ್ಷಿಯನ್, ಇಂಗ್ಲೀಷ್ ಮುಂತಾದ ಭಾಷೆಗಳ ಸಂಸರ್ಗದಿಂದ ಯುಗಧರ್ಮಕ್ಕನುಗುಣವಾಗಿ ಹೊಂದಿಕೊಂಡು ಸಂಪದ್ಭರಿತ ಭಾಷೆಯಾಗಿ ಅದು ರೂಪುಗೊಂಡಿದೆ. ●

*ಬ್ಯಾಂಕಿಂಗ್ ಪ್ರಪಂಚ – ಡಿಸೆಂಬರ್ ೧೯೯೧*

# ಭಾರತದಲ್ಲಿ ಸಹಕಾರಿ ಬ್ಯಾಂಕಿಂಗ್

ಎಂ. ಎಂ. ವಗ್ಗನವರ

ಪ್ರಪಂಚದ ಅನೇಕ ಆರ್ಥಿಕ ವ್ಯವಸ್ಥೆಗಳಲ್ಲಿ ಸಹಕಾರ ಆರ್ಥಿಕ ವ್ಯವಸ್ಥೆ ಅತಿ ಪ್ರಮುಖ ಸ್ಥಾನವನ್ನು ಹಾಗೂ ಮಹತ್ವವನ್ನು ಪಡೆದಿವೆ. ಇದು ಬಂಡವಾಳಶಾಹಿ ಹಾಗೂ ಸಮತಾವಾದಿ ಆರ್ಥಿಕ ಪದ್ಧತಿಗಳಲ್ಲಿಯ ಲೋಪದೋಷಗಳನ್ನು ನಿವಾರಿಸಿ ಅವುಗಳಲ್ಲಿಯ ಒಳ್ಳೆಯ ಅಂಶಗಳನ್ನು ರೂಢಿಸಿಕೊಂಡು ರೂಪುಗೊಂಡ ಒಂದು ಅತ್ಯುತ್ತಮವಾದ ಆರ್ಥಿಕ ಪದ್ಧತಿ. ಇದು ಸಮತಾವಾದಿ ಹಾಗೂ ಬಂಡವಾಳಶಾಹಿ ಆರ್ಥಿಕ ಪದ್ಧತಿಗಳ ನಡುವಿನ ಒಂದು ಸುವರ್ಣ ಮಾಧ್ಯಮ ಆಗಿರುವುದರಿಂದಲೇ ಇಂದು ಇದು ವಿಶ್ವವ್ಯಾಪಿಯಾಗಿಯೂ ಪ್ರಬಲವಾಗಿಯೂ ಬೆಳೆದು ಬಂದಿದೆ.

ಸಹಕಾರ ಆಂದೋಲನ ವಿವಿಧ ರೂಪಗಳಲ್ಲಿ, ವಿವಿಧ ಕಾರಣಗಳಿಗಾಗಿ ಜನ್ಮ ತಳೆದಿದ್ದರೂ ಮೂಲಕಾರಣ ಮಾತ್ರ ಒಂದೇ. ಅದು ಆರ್ಥಿಕವಾಗಿ ಹಿಂದುಳಿದವರ ಆರ್ಥಿಕ ಪ್ರಗತಿಯನ್ನು ಸ್ವಸಹಾಯ ಹಾಗೂ ಪರಸ್ಪರ ಸಹಾಯ ಹಾಗೂ 'ಒಬ್ಬನು ಎಲ್ಲರಿಗಾಗಿ, ಎಲ್ಲರೂ ಒಬ್ಬನಿಗಾಗಿ' ತತ್ತ್ವದ ಮೇರೆಗೆ ಸಾಧಿಸಿ ಸಮಾಜದಲ್ಲಿಯ ಆರ್ಥಿಕ ವೈಷಮ್ಯವನ್ನು ನೈಜವಾಗಿ ನಿರ್ಮೂಲ ಮಾಡಿ ಸಮಾಜದಲ್ಲಿ ನೆಮ್ಮದಿಯನ್ನು ದೊರಕಿಸಿಕೊಡುವುದಾಗಿದೆ.

ಇಂದಿನ ಸಹಕಾರಿ ಆಂದೋಲನ ಪ್ರಪಂಚದಲ್ಲಿಯೇ ಮೊಟ್ಟಮೊದಲು ಗ್ರಾಹಕರ ಸಹಕಾರಿ ಸಂಘಗಳ ರಚನೆಯ ಮೂಲಕ ಇಂಗ್ಲೆಂಡ್‌ನಲ್ಲಿ ೧೮೪೪ರಲ್ಲಿ ಜನ್ಮ ತಳೆದರೆ, ಜರ್ಮನಿಯಲ್ಲಿ ಪತ್ತಿನ ಸಂಘಗಳ ರಚನೆಯ ಮೂಲಕ ಅಸ್ತಿತ್ವದಲ್ಲಿ ಬಂದರೆ, ಭಾರತದಲ್ಲಿ ಮುಖ್ಯವಾಗಿ ಬೇಸಾಯ ಪತ್ತಿನ ಸಹಕಾರಿ ಸಂಘಗಳ ರಚನೆಯ ಮೂಲಕ ಜನ್ಮ ತಾಳಿತು.

**ಭಾರತದಲ್ಲಿ ಸಹಕಾರಿ ಆಂದೋಲನದ ಉದಯ**

ಸಾಲವೆಂಬುದೊಂದು ಶೂಲ. ಸಾಲದ ಶೂಲಕ್ಕೆ ಆಹುತಿಯಾಗಿ ಪರಿತಪಿಸುವ ಜನತೆ ಭಾರತದಲ್ಲಿ ಅಪಾರ. ಅದರಲ್ಲಿಯೂ ರೈತರು ಕೋಟ್ಯಂತರ ಸಾಲದ ಬೇಗೆಯಲ್ಲಿ ಬೇಯುತ್ತಿದ್ದ ಕೋಟ್ಯಂತರ ರೈತ ಕುಟುಂಬಗಳನ್ನು ಅವರ ಸಾಲದಿಂದ ವಿಮುಕ್ತಿಗೊಳಿಸಲು ಹಾಗೂ ಕಡಿಮೆ ಬಡ್ಡಿ ದರದಲ್ಲಿ ಸಾಲ ಹಾಗೂ ಕೃಷಿ ಸಾಧನ ಸಲಕರಣೆಗಳನ್ನು ಒದಗಿಸಿಕೊಟ್ಟು ಕೃಷಿ ಅಭಿವೃದ್ಧಿಗೊಳಿಸಲು ಅಂದಿನ ಸರಕಾರ ೧೯೦೪ ರಲ್ಲಿ ಸಹಕಾರಿ ಕಾನೂನನ್ನು ಜಾರಿಗೆ ತಂದು ಬೇಸಾಯ ಹಾಗೂ ಬೇಸಾಯೇತರ ಸಹಕಾರಿ ಸಂಘಗಳ ರಚನೆಯೊಂದಿಗೆ ಸಹಕಾರಿ ಆಂದೋಲನವನ್ನು ಆರಂಭಿಸಿತು. ಪಾಶ್ಚಾತ್ಯ ರಾಷ್ಟ್ರಗಳಂತೆ ಸಹಕಾರ ಇಲ್ಲಿ ಜನತಾ ಚಳವಳಿಯಾಗಿ ಹುಟ್ಟದೆ ದೇಶದ ಜನತೆಯ ಬಡತನ, ನಿರಕ್ಷರತೆ, ಪರಕೀಯರ ದಬ್ಬಾಳಿಕೆ ಮುಂತಾದ ಕಾರಣಗಳಿಂದಾಗಿ ಸರ್ಕಾರದ ಕೃತಕ ಕೂಸಾಗಿ ಉದಯಿಸಿತು. ಸುಲಭ ಹಾಗೂ ಕಡಿಮೆ ಬಡ್ಡಿ ದರದಲ್ಲಿ ರೈತರಿಗೆ ಸಾಲ ಹಂಚಲು ಸುಲಭವಾಗುವಂತೆ, ರೈತರಿಂದ ಕೂಡಿದ ಸಂಘಗಳನ್ನು ಸಹಕಾರಿ ಅಧಿನಿಯಮದ ಚೌಕಟ್ಟಿನಲ್ಲಿ ಸರಕಾರ ತನ್ನ ಅಧಿಕಾರಿಗಳಿಂದ ಈ ಬೇಸಾಯ ಪತ್ತಿನ ಸಂಘಗಳನ್ನು ಸ್ಥಾಪಿಸಿತೇ ವಿನಾ ರೈತರೇ ಸ್ವಪ್ರೇರಣೆಯಿಂದ ತಮ್ಮ ಆರ್ಥಿಕ ಸುಧಾರಣೆಗಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಿಕೊಳ್ಳಲಿಲ್ಲ. ಈ ದೋಷ ಇಂದಿಗೂ ಭಾರತದಲ್ಲಿ ಮುಂದುವರಿದಿದೆ.

**ಸಹಕಾರಿ ಬ್ಯಾಂಕುಗಳ ಉಗಮ**

೧೯೦೪ ರಲ್ಲಿ ಸಹಕಾರಿ ಅಧಿನಿಯಮ ಬಂದ ಮೇಲೆ ರಾಷ್ಟ್ರಾದ್ಯಂತ ಸಹಕಾರಿ ಸಂಘಗಳು ಹುಟ್ಟಿದರೂ ೧೯೦೪ರ ಪೂರ್ವದಲ್ಲಿಯೇ ಕೆಲವೊಂದು ಸಂಸ್ಥೆಗಳು ಜನರಿಂದ ಸಹಕಾರಿ ತತ್ತ್ವದ ಮೇರೆಗೆ ಕಂಪನಿ ಕಾನೂನಿನ ಮೇರೆಗೆ ರಾಷ್ಟ್ರಾದ್ಯಂತ ರಚನೆಗೊಂಡಿದ್ದುವು. ೧೮೯೧ರಲ್ಲಿ ಪಂಜಾಬಿನಲ್ಲಿ ರಚನೆಗೊಂಡ ಕೂಡೊಕ್ಕಲು ಬೇಸಾಯ ಸಂಘ ೧೮೯೪ ರಿಂದ ಮೈಸೂರು ಸಂಸ್ಥಾನದಲ್ಲಿ ರಚನೆಗೊಂಡ ಕೃಷಿ ಬ್ಯಾಂಕುಗಳು ಮುಂತಾದವು ಇವಕ್ಕೆ ಉದಾಹರಣೆಗಳಾಗಿವೆ. ೫-೨-೧೯೦೫ ರಲ್ಲಿ ಬರೋಡಾದಲ್ಲಿ ಬಡ ಕುಟುಂಬಗಳ ಆರ್ಥಿಕ ಪ್ರಗತಿಗಾಗಿ ವಿಟ್ಠಲ್ ಲಕ್ಷ್ಮಣ ಕವ್ಠೇಕರ್ ಅವರು ಸ್ಥಾಪಿಸಿದ ಅನ್ಯೋನ್ಯ ಸಹಕಾರಿ ಬ್ಯಾಂಕು ಭಾರತದ ಪ್ರಪ್ರಥಮ ಸಹಕಾರಿ ಬ್ಯಾಂಕೆಂದೂ ಅದರಂತೆ ಶ್ರೀ ಚಂದ್ರಶೇಖರ ಅಯ್ಯರ್ ರವರ ಅಧ್ಯಕ್ಷತೆಯಲ್ಲಿ ೮-೧೨-೧೯೦೫ ರಂದು ಸ್ಥಾಪಿತವಾದ ದಿ ಬೆಂಗಳೂರು ಸಿಟಿ ಅರ್ಬನ್ ಕೋ-ಅಪರೇಟೀವ್ ಬ್ಯಾಂಕ್ ಭಾರತದ ಎರಡನೆಯ ಬ್ಯಾಂಕೆಂದೂ ಪರಿಗಣಿಸಲಾಗಿದೆ. ಶ್ರೀ ಎಸ್.ವಿ. ಕುಲಕರ್ಣಿಯವರ ಮುಂದಾಳುತನದಲ್ಲಿ ೧೯೦೫ ರಲ್ಲಿ ಧಾರವಾಡ ಜಿಲ್ಲೆಯ ಬೆಟಗೇರಿಯಲ್ಲಿ ಸ್ಥಾಪಿಸಲ್ಪಟ್ಟ ದಿ ಗದಗ್ ಬೆಟಗೇರಿ ಅರ್ಬನ್ ಕೋ-ಅಪರೇಟೀವ್ ಬ್ಯಾಂಕ್ ಅಂದಿನ ಮುಂಬೈ ಪ್ರಾಂತ್ಯದ ಮೊಟ್ಟಮೊದಲನೆಯ ಬ್ಯಾಂಕು. ಇದು ಭಾರತದ ಮೊದಲನೆಯ ಸಹಕಾರಿ ಅಧಿನಿಯಮದ ೧೯೦೪ ಮೇರೆಗೆ ರಚನೆಗೊಂಡ ಮೊದಲನೆಯ ಬ್ಯಾಂಕು.

**ಸಹಕಾರಿ ಬ್ಯಾಂಕುಗಳ ಬಗೆಗಳು**

ಸಹಕಾರಿ ಬ್ಯಾಂಕುಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು. ಕೃಷಿ ಅಭಿವೃದ್ಧಿಗೆ ಸಾಲ ಒದಗಿಸುವ ಬ್ಯಾಂಕುಗಳು ಮತ್ತು ಬೇಸಾಯೇತರ ಚಟುವಟಿಕೆಗಳಿಗೆ ಸಾಲ

ನೀಡುವ ಬ್ಯಾಂಕುಗಳು. ಬೇಸಾಯ ಅಭಿವೃದ್ಧಿಗಾಗಿ ರಾಜ್ಯ ಸಹಕಾರಿ ಬ್ಯಾಂಕುಗಳು ಮತ್ತು ಜಿಲ್ಲಾ ಸಹಕಾರಿ ಕೇಂದ್ರೀಯ ಬ್ಯಾಂಕುಗಳು ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ಹಂಚುತ್ತವೆ. ಅದರಂತೆ ದೀರ್ಘಾವಧಿ ಸಾಲವನ್ನು ವಿತರಣೆ ಮಾಡಲು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ಹಾಗೂ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಸ್ಥಾಪಿತಗೊಂಡಿವೆ.

ಬೇಸಾಯೇತರ ಚಟುವಟಿಕೆಗಳಿಗೆ ಸಾಲ ಒದಗಿಸಲು ಪಟ್ಟಣಗಳಲ್ಲಿ ಪಟ್ಟಣ ಸಹಕಾರಿ ಬ್ಯಾಂಕುಗಳು ರಚನೆಗೊಂಡಿವೆ.

ಸಹಕಾರಿ ಬ್ಯಾಂಕುಗಳ ರಚನೆ, ಆಡಳಿತ, ಮೇಲ್ವಿಚಾರಣೆ ಮತ್ತು ಲೆಕ್ಕ ಪರಿಶೋಧನೆ ಇವು ರಾಜ್ಯ ಸಹಕಾರಿ ಅಧಿನಿಯಮದ ಮೇರೆಗೆ ಆಗುತ್ತಿದ್ದರೂ ಇವುಗಳ ಬ್ಯಾಂಕಿಂಗ್ ವ್ಯವಹಾರ ಮಾತ್ರ ಸಹಕಾರಿ ಬ್ಯಾಂಕುಗಳಿಗಾಗಿಯೇ. ೧೯೬೬ರಲ್ಲಿ ಜಾರಿಗೆ ಬಂದ ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ ೧೯೪೯ ಸಹಕಾರಿ ಬ್ಯಾಂಕುಗಳಿಗೂ ಅನ್ವಯವಾಗುತ್ತದೆ. ಆದರೆ ಈ ಸಹಕಾರಿ ಬ್ಯಾಂಕಿಂಗ್ ಕಾನೂನು ಷೇರು ಬಂಡವಾಳ ಹಾಗೂ ಎಲ್ಲ ನಿಧಿಗಳ ಒಟ್ಟು ಮೊತ್ತ ರೂ. ೧ ಲಕ್ಷಕ್ಕಿಂತ ಕಡಿಮೆ ಇದ್ದ ಬೇಸಾಯೇತರ ಪತ್ತಿನ ಸಹಕಾರ ಸಂಘಗಳಿಗೆ ಅನ್ವಯಿಸುವುದಿಲ್ಲ. ಅದರಂತೆ ಈ ಕಾಯಿದೆ ಪ್ರಾಥಮಿಕ ಕೃಷಿ ಪತ್ತಿನ ಸಂಘಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳಿಗೂ ಅನ್ವಯಿಸುವುದಿಲ್ಲ.

ಭಾರತದಲ್ಲಿ ಕೃಷಿ ಸಹಕಾರಿ ಬ್ಯಾಂಕುಗಳ ರಚನೆಯು ಮುಖ್ಯವಾಗಿ ಒಕ್ಕೂಟ ರೂಪದಲ್ಲಿ (Federal Structure) ಇದ್ದರೂ ಇವುಗಳು ಹೆಚ್ಚು ಬ್ಯಾಂಕಿಂಗ್ ವ್ಯವಹಾರ ಹೊಂದಲು ತಮ್ಮ ಶಾಖೆಗಳನ್ನು ದೊಡ್ಡ ದೊಡ್ಡ ನಗರಗಳಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ತೆರೆದಿವೆ. ಅದರಂತೆ ಬೇಸಾಯೇತರ ಸಹಕಾರಿ ಬ್ಯಾಂಕುಗಳ ನಗರ ಬ್ಯಾಂಕುಗಳು ರಚನೆ ಏಕ ಘಟಕ ರೂಪದಲ್ಲಿವೆ. ಆದರೆ ಈ ನಗರ ಬ್ಯಾಂಕುಗಳು ರಾಜ್ಯ ಮಟ್ಟದಲ್ಲಿ ತಮ್ಮ ಸಂಘಗಳನ್ನು ನಗರ ಬ್ಯಾಂಕುಗಳು ಸಾಮೂಹಿಕವಾಗಿ ಎದುರಿಸುವ ಕುಂದುಕೊರತೆಗಳ ಬಗೆಗೆ ವಿಚಾರ ವಿನಿಮಯಗೈಯಲು ಹಾಗೂ ನಗರ ಬ್ಯಾಂಕಿಂಗ್ ಅಭಿವೃದ್ಧಿಗಾಗಿ ಯೋಗ್ಯ ಮಾರ್ಗದರ್ಶನ ಮುಂತಾದುವುಗಳನ್ನು ಹೊಂದಲು ರಚಿಸಿಕೊಂಡಿವೆ.

**ಸಹಕಾರಿ ಬ್ಯಾಂಕುಗಳ ವಿಕಾಸ**

ಸಹಕಾರಿ ಬ್ಯಾಂಕುಗಳು ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ಕಾರಣಗಳಿಂದ ಹೆಚ್ಚು ಯಶಸ್ವಿಯಾಗಿ ಹಾಗೂ ಲಾಭಪ್ರದವಾಗಿ ಬೆಳೆದುಬರಲಿಲ್ಲ. ಆಂತರಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳದಿರುವುದು ಸರಕಾರದ ಅನಾದರ, ಅಲ್ಪಹಿತಾಸಕ್ತಿಗಳ ಕೈವಾಡ, ಸುಧಾರಿತ ವೈಜ್ಞಾನಿಕ ಆಡಳಿತ ವ್ಯವಸ್ಥೆಯ ಅಭಾವ ಮುಂತಾದ ಅನೇಕ ಕಾರಣಗಳಿಂದ ಸಹಕಾರಿ ಬ್ಯಾಂಕುಗಳ ವಿಕಾಸ ಕುಂಠಿತಗೊಂಡಿತು. ಆದರೆ ೧೯೫೪ ರಿಂದ ಸರಕಾರ ಅಖಿಲ ಭಾರತ ಗ್ರಾಮೀಣ ಪತ್ತು ಪರಿಶೀಲನಾ ಸಮಿತಿ (All India Rural Credit Survey Committee) ಮಾಡಿದ ಅನೇಕ ಶಿಫಾರಸುಗಳನ್ನು ಅನುಷ್ಠಾನದಲ್ಲಿ ತಂದ ಮೇಲೆ ಸಹಕಾರಿ ಬ್ಯಾಂಕುಗಳು ಪುನರುಜ್ಜೀವನಗೊಂಡು ಇಂದು ಯಶಸ್ವಿಯಾಗಿ ಮುನ್ನಡೆಯುತ್ತಿದೆ. ಸಹಕಾರಿ ಬ್ಯಾಂಕುಗಳ ಪ್ರಗತಿಯನ್ನು ಮುಂದಿನ ಪುಟಗಳಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ ಕಾಣಬಹುದು.

ಮೇಲೆ ಹೇಳಿದ ಪಟ್ಟಿಯಿಂದ ಸಹಜವಾಗಿ ತಿಳಿದು ಬರುವುದೇನೆಂದರೆ ಸಹಕಾರಿ ಬ್ಯಾಂಕುಗಳು ಬೇಸಾಯೇತರ ಸಾಲ ಹಂಚಿಕೆಯಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸುತ್ತಲಿವೆ. ಅದರಂತೆ ರಾಜ್ಯ ಸಹಕಾರಿ ಬ್ಯಾಂಕುಗಳು, ಜಿಲ್ಲಾ ಕೇಂದ್ರೀಯ ಬ್ಯಾಂಕುಗಳು ಮತ್ತು ನಗರ ಸಹಕಾರಿ ಬ್ಯಾಂಕುಗಳು ತಮ್ಮ ಠೇವಣಿ ಸಂಗ್ರಹಣೆಯಲ್ಲಿಯೂ ಪ್ರಗತಿಯನ್ನು ಸಾಧಿಸುತ್ತಲಿವೆ.

ಇಂದು ಬೇಸಾಯ ಸಾಲ ಕ್ಷೇತ್ರದಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಪಾದಾರ್ಪಣೆ ಮಾಡಿರುವುದರಿಂದ ಸಹಕಾರಿ ಬ್ಯಾಂಕುಗಳ ಕೃಷಿ ಸಾಲ ವಿತರಣಾ ವ್ಯವಹಾರ ಕೊಂಚ ತಗ್ಗಿದ್ದರೂ ಗ್ರಾಮೀಣ ಅಭಿವೃದ್ಧಿಗಾಗಿ ೧೯೮೦ ರಲ್ಲಿ ಒದಗಿಸಿದ ಒಟ್ಟು ಸಾಂಸ್ಥಿಕ ಉದರಿಯಲ್ಲಿ ಶೇ. ೬೬.೭ ರಷ್ಟು ಭಾಗ ಸಹಕಾರಿ ಸಂಸ್ಥೆಗಳಿಂದಲೇ ಹಂಚಲ್ಪಡುತ್ತವೆ.

## ಭಾರತದಲ್ಲಿ ಸಹಕಾರಿ ಬ್ಯಾಂಕುಗಳ ಪ್ರಗತಿ

| ಬ್ಯಾಂಕುಗಳು ಹೆಸರು | ವಿವರ | ಸಹಕಾರಿ ವರ್ಷಗಳು ಜುಲೈ-ಜೂನ್ | | |
|---|---|---|---|---|
| | | ೧೯೭೮-೭೯ | ೧೯೭೯-೮೦ | ೧೯೮೦-೮೧ |
| ೧. ರಾಜ್ಯ ಸಹಕಾರಿ ಬ್ಯಾಂಕುಗಳು | ೧. ಸಂಖ್ಯೆ | ೨೭ | ೨೭ | ೨೭ |
| | ೨. ಸ್ವಂತ ಬಂಡವಾಳ | ೨೪೯ | ೩೧೧ | ೩೪೧ |
| | ೩. ಠೇವಣಿಗಳು | ೧೨೨೬ | ೧೪೨೪ | ೨೬೭೪ |
| | ೪. ದುಡಿಯುವ ಬಂಡವಾಳ | ೨೦೩೭ | ೨೨೭೫ | ೨೭೬೫ |
| | ೫. ಹಂಚಿದ ಸಾಲ | ೨೨೮೪ | ೨೩೬೩ | ೩೭೯೨ |
| | ೬ ಬರಬೇಕಿದ್ದ ಬಾಕಿ ಸಾಲ | ೧೪೨೦ | ೧೫೧೦ | ೧೭೭೨ |
| | ೭. ಸುಸ್ತಿ ಸಾಲ | ೧೨೭ | ೧೭೫ | ೧೨೩ |

| | | | | |
|---|---|---|---|---|
| ೨. ಜಿಲ್ಲಾ ಕೇಂದ್ರೀಯ ಬ್ಯಾಂಕುಗಳು | ೧. ಸಂಖ್ಯೆ | ೩೩೮ | ೩೩೭ | ೩೩೭ |
| | ೨. ಸ್ವಂತ ಬಂಡವಾಳ | ೫೪೬ | ೬೦೨ | ೬೫೨ |
| | ೩. ಠೇವಣಿಗಳು | ೧೬೬೯ | ೧೯೭೮ | ೨೪೧೬ |
| | ೪. ದುಡಿಯುವ ಬಂಡವಾಳ | ೩೩೭೬ | ೩೮೭೦ | ೪೬೮೧ |
| | ೫. ಹಂಚಿದ ಸಾಲ | ೨೪೩೨ | ೨೬೯೫ | ೩೨೧೬ |
| | ೬. ಬರಬೇಕಿದ್ದ ಬಾಕಿ ಸಾಲ | ೨೩೨೮ | ೨೬೧೭ | ೨೯೫೬ |
| | ೭. ಸುಸ್ತಿ ಸಾಲ | ೮೩೫ | ೯೬೯ | ೯೩೭ |
| ೩. ರಾಜ್ಯಕೇಂದ್ರ ಭೂ ಅಭಿವೃದ್ಧಿ ಬ್ಯಾಂಕುಗಳು | ೧. ಸಂಖ್ಯೆ | ೧೯ | ೧೯ | – |
| | ೨. ಸ್ವಂತ ಬಂಡವಾಳ | ೨೩೫ | ೨೮೦ | – |
| | ೩. ದುಡಿಯುವ ಬಂಡವಾಳ | ೨೧೯೬ | ೨೩೫೫ | – |
| | ೪. ಹಂಚಿದ ಸಾಲ | ೨೪೯ | ೩೦೯ | – |
| | ೫. ಬರಬೇಕಿದ್ದ ಬಾಕಿ ಸಾಲ | ೧೩೯೨ | ೧೫೩೫ | – |
| | ೬. ಸುಸ್ತಿ ಸಾಲ | ೧೬೬ | ೨೦೫ | – |
| ೪. ಪ್ರಾಥಮಿಕ ಕೃಷಿ ಸಾಲ ಸಂಸ್ಥೆಗಳು | ೧. ಸಂಖ್ಯೆ (ಸಾವಿರಗಳಲ್ಲಿ) | ೯೬ | ೯೫ | ೯೪ |
| | ೨. ಸ್ವಂತ ಬಂಡವಾಳ | ೫೨೫೬೯ | ೫೪೮೩೬ | ೫೭೩೩೦ |
| | ೩. ಠೇವಣಿಗಳು | ೬೧೮ | ೬೮೭ | ೭೨೯ |
| | ೪. ದುಡಿಯುವ ಬಂಡವಾಳ | ೨೧೬ | ೨೫೦ | ೨೬೬ |
| | ೫. ಒಟ್ಟು ವಿತರಣೆಯಾದ ಸಾಲ | ೧೪೫೮ | ೧೬೨೯ | ೧೬೫೬ |
| | ೬. ಒಟ್ಟುಬರಬೇಕಿದ್ದ ಬಾಕಿ ಸಾಲ | ೨೦೪೯ | ೨೩೭೪ | ೨೫೦೮ |
| | ೭. ಒಟ್ಟು ಸುಸ್ತಿ ಸಾಲ | ೨೯೭ | ೧೦೮೯ | ೧೦೯೦ |
| ೫. ನಗರ ಸಹಕಾರಿ ಬ್ಯಾಂಕುಗಳು | ೧. ಸಂಖ್ಯೆ | – | ೧೦೮೩ | ೧೧೧೭ |
| | ೨. ಸ್ವಂತ ಬಂಡವಾಳ | – | ೧೫೧ | ೧೮೭ |
| | ೩. ಠೇವಣಿಗಳು | – | ೯೧೩ | ೧೨೪೩ |
| | ೪. ವಿತರಣೆಯಾದ ಸಾಲ | – | ೬೮೬ | ೯೪೫ |

ಇದರಿಂದ ಗ್ರಾಮೀಣ ಅಭಿವೃದ್ಧಿಗೆ ಸಹಕಾರಿ ಬ್ಯಾಂಕುಗಳ ನೆರವೆಷ್ಟೆಂಬುದರ ಬಗ್ಗೆ ಅರಿವಾಗುತ್ತದೆ. ಇಂದು ಬೇಸಾಯ ಪತ್ತಿನ ಸಂಘಗಳು ಶೇ. ೯೬ ರಷ್ಟು ಹಳ್ಳಿಗಳನ್ನು ಹಾಗೂ ಶೇ. ೯೪ ರಷ್ಟು ಗ್ರಾಮೀಣ ಜನತೆಯನ್ನು ವ್ಯಾಪಿಸಿವೆ. ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಸಹಕಾರಿ ಬ್ಯಾಂಕುಗಳು ಎಷ್ಟು ಯಶಸ್ವಿಯಾಗಿ ಬೆಳೆದು ಬಂದಿವೆಯೆಂದರೆ ಅವುಗಳಿಗೆ ಠೇವಣಿ ಸಂಗ್ರಹಿಸುವುದು ಸಮಸ್ಯೆಯಾಗಿರದೆ ಹೇರಳವಾಗಿ ಸಂಗ್ರಹಿಸಿದ ಠೇವಣಿ ಹಣವನ್ನು ಹೇಗೆ ವಿನಿಯೋಜಿಸಬೇಕೆಂಬುದೇ ಒಂದು ಪ್ರಬಲ ಸಮಸ್ಯೆಯಾಗಿದೆ.

ಸಹಕಾರಿ ಬ್ಯಾಂಕುಗಳಲ್ಲಿ ಇಂದು ಎಷ್ಟೇ ಪ್ರಗತಿ ಕಂಡು ಬಂದಿದ್ದರೂ ಅವು ಅನೇಕ ದೋಷಗಳಿಂದ ಇನ್ನೂ ಸಂಪೂರ್ಣವಾಗಿ ಮುಕ್ತವಾಗಿಲ್ಲ. ಅವುಗಳಲ್ಲಿಯ ಮುಖ್ಯ ದೋಷಗಳೆಂದರೆ, ಸುಸ್ತಿ ಬಾಕಿ ಸಮಸ್ಯೆ. ಹೆಚ್ಚು ಆಂತರಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳದೆ ಸರಕಾರ ಮತ್ತು ರಿಸರ್ವ್ ಬ್ಯಾಂಕಿನ ಮೇಲೆ ಸಾಲಕ್ಕಾಗಿ ಅವಲಂಬನೆ, ವೈಜ್ಞಾನಿಕ ಆಡಳಿತ ಪದ್ಧತಿಯ ಅಭಾವ, ಹದಗೆಟ್ಟ ಆಡಳಿತ ಪದ್ಧತಿ, ರಾಜಕೀಯತೆ ಮುಂತಾದುವು ಗಳೆನ್ನಬಹುದು.

ಸಹಕಾರಿ ಬ್ಯಾಂಕುಗಳು ಈ ದೋಷಗಳಿಂದ ಮುಕ್ತವಾದರೆ ಅವು ಇನ್ನೂ ಸಮರ್ಥ ಸಂಸ್ಥೆಗಳಾಗಿ ಬೆಳೆದು ಬರಬಲ್ಲವು. ಹಾಗೂ ವಾಣಿಜ್ಯ ಬ್ಯಾಂಕುಗಳೊಡನೆ ಸರಿಸಮನಾಗಿ ನಿಂತು ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಶ್ರಮಿಸಬಲ್ಲವು ಎಂಬುದರಲ್ಲಿ ಯಾವುದೇ ರೀತಿಯ ಸಂಶಯವಿಲ್ಲ. ●

*ಬ್ಯಾಂಕಿಂಗ್ ಪ್ರಪಂಚ – ಅಕ್ಟೋಬರ್ ೧೯೮೩*

## ೧೯೪೯-೬೯ ರಲ್ಲಿ ಬ್ಯಾಂಕಿಂಗ್ ಬೆಳವಣಿಗೆ

೧೯೪೯ ರಲ್ಲಿ ಭಾರತದಲ್ಲಿ ಒಟ್ಟು ೬೨೯ ವಾಣಿಜ್ಯ ಬ್ಯಾಂಕುಗಳಿದ್ದವು. ಇವುಗಳ ಶಾಖೆಗಳ ಸಂಖ್ಯೆ ೪೪೪೧. ಈ ೬೨೯ ಬ್ಯಾಂಕುಗಳ ಪೈಕಿ ೯೪ ಅನುಸೂಚಿತ ಬ್ಯಾಂಕುಗಳು ಇವುಗಳ ಶಾಖೆಗಳು ೨೮೫೨. ಅನುಸೂಚಿತವಲ್ಲದ ಬ್ಯಾಂಕುಗಳು ೫೨೬. ಇವು ೧೫೮೯ ಶಾಖೆಗಳನ್ನು ಹೊಂದಿದ್ದವು.

ಜೀವಸತ್ವವಿಲ್ಲದ ಬ್ಯಾಂಕಿಂಗ್ ಸಂಸ್ಥೆಗಳನ್ನು ದೃಢಕಾಯುವಾದ ಹಾಗೂ ಚೈತನ್ಯಪೂರ್ಣವಾದ ಬ್ಯಾಂಕುಗಳೊಂದಿಗೆ ವಿಲೀನಗೊಳಿಸಿ ಒಟ್ಟಿನಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಆರೋಗ್ಯವನ್ನು ಬೆಳೆಸಬೇಕೆಂಬ ಸರಕಾರದ ನೀತಿಯ ಪರಿಣಾಮವಾಗಿ ೧೯೬೯ರ ವೇಳೆಗೆ ಬ್ಯಾಂಕಿಂಗ್ ಸಂರಚನೆಯ ಸ್ವರೂಪವೇ ಗಮನಾರ್ಹವಾಗಿ ಬದಲಾಯಿತು. ದೇಶದ ಒಟ್ಟು ಬ್ಯಾಂಕುಗಳ ಸಂಖ್ಯೆ ೮೯ಕ್ಕೆ ಇಳಿಯಿತು. ಇವುಗಳ ಪೈಕಿ ೭೩ ಅನುಸೂಚಿತ ಬ್ಯಾಂಕುಗಳು. ಇವು ೮೦೪೫ ಶಾಖೆಗಳನ್ನು ಹೊಂದಿದ್ದುವು. ಉಳಿದ ೧೬ ಅನುಸೂಚಿತವಲ್ಲದ ಬ್ಯಾಂಕುಗಳ ಸಂಖ್ಯೆ ಕೇವಲ ೨೧೭. ಬ್ಯಾಂಕುಗಳ ಸಂಖ್ಯೆ ೧೯೪೯ ರಲ್ಲಿದ್ದುದರ ಕೇವಲ ೧:೮ ರಷ್ಟಕ್ಕೆ ಇಳಿದರೂ ಶಾಖೆಗಳ ಸಂಖ್ಯೆ ಸುಮಾರು ಇಮ್ಮಡಿಯಾಯಿತು.

೧೯೪೯ ರಲ್ಲಿ ಪ್ರತಿ ೯೮೦೦೦ ಜನಕ್ಕೆ ೧ ರಂತೆ ಬ್ಯಾಂಕಿಂಗ್ ಕಛೇರಿಗಳಿದ್ದುವು. ೧೯೬೯ರ ವೇಳೆಗೆ ಪ್ರತಿ ೬೫೦೦೦ ಜನಕ್ಕೆ ಒಂದು ಬ್ಯಾಂಕಿಂಗ್ ಕಛೇರಿಯಿತ್ತು.

# ರಫ್ತು ಉದರಿ ಖಾತರಿ ನಿಗಮ

**ಟಿ. ಕೆ. ರಂಗನಾಥ್**

ಆಧುನಿಕ ಜಗತ್ತಿನಲ್ಲಿ ಯಾವುದೇ ದೇಶ ಸ್ವಯಂ ಪರಿಪೂರ್ಣವಾಗಿರಲು ಸಾಧ್ಯವಾಗುವುದಿಲ್ಲ. ತನಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ತಾನೇ ಉತ್ಪಾದಿಸಿಕೊಳ್ಳುವುದು ಅತ್ಯಂತ ಮುಂದುವರಿದ ಅಮೆರಿಕದಂಥ ದೇಶಕ್ಕೇ ಸಾಧ್ಯವಾಗದೆ ಇರುವಾಗ ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರ ಸಾಕಷ್ಟು ವಸ್ತುಗಳನ್ನು ಸೇವೆಗಳನ್ನು ಪರದೇಶಗಳಿಂದ ಪಡೆಯಬೇಕಾಗಿದೆ. ಸಿದ್ಧ ವಸ್ತುಗಳ ಲಭ್ಯತೆ ಈ ತೆರನಾದದ್ದಾದರೆ, ಕಚ್ಚಾ ವಸ್ತುಗಳಂತೂ ವಿಶ್ವದ ಎಲ್ಲೆಡೆಯೂ ದೊರೆಯದಿರುವುದು ಸರ್ವರಿಗೂ ತಿಳಿದ ಸಂಗತಿ. ಹೀಗಾಗಿ ಪರಸ್ಪರ ಅವಲಂಬನೆಯ ಅಗತ್ಯ ಇದ್ದೇ ಇದೆ. ಈ ತೆರನ ಆಮದಿಗೆ ಕೊಡಬೇಕಾದ ಹಣವನ್ನು ನಾವು ನಮ್ಮ ಸರಕುಗಳನ್ನು ರಫ್ತು ಮಾಡುವುದರ ಮೂಲಕ ಗಳಿಸಬೇಕು, ಇಲ್ಲವೇ ಬೇರೆ ದೇಶಗಳಿಂದ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಸಾಲ ಪಡೆಯಬೇಕು. ಈ ತೆರನ ಸಾಲದ ಮೇಲಿನ ಬಡ್ಡಿ ಪಾವತಿ ಮಾಡಲು, ಸಾಲ ಮರುಪಾವತಿ ಮಾಡಲು ರಫ್ತಿನ ಮೂಲಕವೇ ವಿದೇಶೀ ವಿನಿಮಯ ಗಳಿಸಬೇಕು.

ಅಂತರರಾಷ್ಟ್ರೀಯ ವ್ಯಾಪಾರ ಇಂದು ಎಂದಿಗಿಂತ ಹೆಚ್ಚು ಸ್ಪರ್ಧಾತ್ಮಕವಾಗಿದೆ. ಇತರ ದೇಶಗಳ ಉತ್ಪಾದಕರೊಡನೆ ಸರಕಿನ ಗುಣಮಟ್ಟವ ಸರಕಿನ ಬೆಲೆಗಳನ್ನಲ್ಲದೆ ಅವರು ಕೊಡುವ ಉದರಿ ಸೌಲಭ್ಯದ ವಿಚಾರದಲ್ಲಿಯೂ ಸ್ಪರ್ಧಿಸಬೇಕಾಗಿದೆ. ದೂರದೂರದ ದೇಶಗಳಿಗೆ ಸರಕುಗಳನ್ನು ಸರಬರಾಜು ಮಾಡಲು ಸಾಕಷ್ಟು ಸಮಯಾವಕಾಶ ಬೇಕು. ಸರಕು ಇಲ್ಲಿಂದ ಅಲ್ಲಿಗೆ ತಲುಪಿ ತತ್‌ಕ್ಷಣ ಹಣ ಪಾವತಿಯಾದರೂ ಆ ಹಣ ರಫ್ತುದಾರನ ಕೈ ಸೇರಲು ಹಲವು ದಿನ ಬೇಕಾಗುತ್ತದೆ. ಇದರ ಜೊತೆಗೆ ರಫ್ತುದಾರ ಉದರಿ ಸೌಲಭ್ಯ ಕೊಡಬೇಕಾದಲ್ಲಿ ಸರಕಿನ ಬೆಲೆ ಪಾವತಿಗಾಗಿ ಕಾಯುವ ಕಾಲ ಮತ್ತಷ್ಟು ದೀರ್ಘವಾಗುತದೆ. ಕಂಡರಿಯದ ದೇಶಗಳಲ್ಲಿರುವ ಗ್ರಾಹಕರಿಗೆ ಉದರಿ ನೀಡಬೇಕಾದಾಗ ರಫ್ತುದಾರ ಹಿಂಜರಿಯುವುದು ಸಹಜವೇ ಆಗಿದೆ. ಸರಿಯಾದ ಸಮಯದಲ್ಲಿ ಹಣ ಪಾವತಿಯಾಗದೆ ಹೋದರೆ ಆಗುವ ನಷ್ಟ ಅಪಾರ.

ಈ ರೀತಿ ಕಳುಹಿಸಿದ ಸರಕಿಗೆ ಹಣ ಪಾವತಿಯಾಗದೆ ಹೋಗುವುದಕ್ಕೆ ಇರುವ ಕಾರಣಗಳನ್ನು ಎರಡಾಗಿ ವಿಂಗಡಿಸಬಹುದು: ೧. ವಾಣಿಜ್ಯಕ ೨. ರಾಜಕೀಯ.

ವಾಣಿಜ್ಯಕ ಕಾರಣಗಳಲ್ಲಿ ಗ್ರಾಹಕನ ದಿವಾಳಿ, ಬೇಕೆಂದೆ ಬಾಕಿ ಉಳಿಸಿಕೊಳ್ಳುವಿಕೆ; ರಾಜಕೀಯ ಕಾರಣಗಳಲ್ಲಿ ಯುದ್ಧ ಆಂತರಿಕ ಕಲಹ, ಕ್ರಾಂತಿ, ಸರಕಾರದ ನೀತಿಯ, ಆರ್ಥಿಕ ನೀತಿಯ ಬದಲಾವಣೆ - ಪ್ರಮುಖವಾದುವು. ಈ ತೆರನ ನಷ್ಟಗಳ ಸಂಭಾವ್ಯತೆಯನ್ನು ಗುರುತಿಸಿ ನಮ್ಮಲ್ಲಿನ ಉತ್ಪಾದಕರು, ಬ್ಯಾಂಕುಗಳು ಉದರಿ ಸೌಲಭ್ಯ ನೀಡಲು ಹಿಂಜರಿಯುವುದರಿಂದ ರಫ್ತು ಬೆಳೆವಣಿಗೆ ಕುಂಠಿತಗೊಳ್ಳುತ್ತದೆ. ಇಂತಹ ಸಂದರ್ಭದಲ್ಲಿ ರಫ್ತು ಉದರಿ ಖಾತರಿ ನಿಗಮ ವಹಿಸುವ ಪಾತ್ರ ಮಹತ್ತರವಾದುದು.

೧೯೫೭ ರಲ್ಲಿ ಭಾರತ ಸರಕಾರ ನೇಮಿಸಿದ ರಫ್ತು ಉದರಿ ಖಾತರಿ ಸಮಿತಿಯ ಶಿಫಾರಸನ್ನು ಅನುಸರಿಸಿ ೧೯೫೭ ರಲ್ಲಿ ರಫ್ತು ಮಾಡಲ್ಪಟ್ಟ ಸರಕುಗಳಿಗೆ, ಸಲ್ಲಿಸಲಾದ ಸೇವೆಗೆ ಬರಬೇಕಾದ ಹಣದ ಬಗ್ಗೆ ಖಾತರಿ ನೀಡುವುದರ ಮೂಲಕ ವಿದೇಶಿ ವ್ಯಾಪಾರವನ್ನು ಉತ್ತೇಜಿಸುವ ಹಾಗೂ ಪ್ರೋತ್ಸಾಹಿಸುವ ಮಹದುದ್ದೇಶದಿಂದ ಸ್ಥಾಪಿಸಲ್ಪಟ್ಟಿತು. ೧೯೬೪ ರಲ್ಲಿ ತನ್ನ ಹೆಸರನ್ನು ಬದಲಾಯಿಸಿಕೊಳ್ಳುವುದರ ಜೊತೆಗೆ ಬ್ಯಾಂಕುಗಳು ರಫ್ತುದಾರರಿಗೆ ನೀಡುವ ಸಾಲಗಳಿಗೆ ಖಾತರಿ ನೀಡುವ ಯೋಜನೆಯನ್ನು ಜಾರಿಗೆ ತಂದಿತು. ಕೇಂದ್ರ ವಾಣಿಜ್ಯ ಮಂತ್ರಾಲಯದ ಆಡಳಿತ ನಿಯಂತ್ರಣದಲ್ಲಿರುವ ಈ ಸಂಸ್ಥೆಯ ದೈನಂದಿನ ಆಡಳಿತವನ್ನು ನಿರ್ದೇಶಕ ಮಂಡಳಿಯ ಸದಸ್ಯರು ಬ್ಯಾಂಕಿಂಗ್, ವಿಮೆ, ಕೈಗಾರಿಕೆ, ವಾಣಿಜ್ಯ ಮುಂತಾಗಿ ಹಲವು ರಂಗಗಳಿಗೆ ಸೇರಿದವರಾಗಿದ್ದು, ಆಯಾ ವರ್ಗಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಾರೆ. ೧೯೮೨ ರಲ್ಲಿ ತನ್ನ ರಜತ ಮಹೋತ್ಸವವನ್ನು ಆಚರಿಸಿದ ನಿಗಮ ೧೯೮೧ ರಲ್ಲಿ ವಿಮೆ ಮಾಡಿದ ಮೊತ್ತ ೭೪೧೫ ಕೋಟಿ ರೂಪಾಯಿಗಳು.

ರಫ್ತು ಉದರಿ ಖಾತರಿ ನಿಗಮ ರಫ್ತುದಾರರಿಗೆ ನಾಲ್ಕು ಬಗೆಯ ವಿಮಾ ರಕ್ಷಣೆ ಒದಗಿಸುತ್ತದೆ.

**೧. ರಫ್ತು ರವಾನೆ ವ್ಯಾಪಕ ನಷ್ಟ ಸಂಭವ ವಿಮೆ (SHIPMENTS COMPREHENSIVE RISKS POLICY)**

ಸರಕು ರವಾನಿಸಿದಂದಿನಿಂದ ವಾಣಿಜ್ಯಕ ಕಾರಣಗಳಿಂದ ಹಾಗೂ ರಾಜಕೀಯ ಬೆಳವಣಿಗೆಗಳಿಂದ ಸಂಭವಿಸಬಹುದಾದ ನಷ್ಟದ ವಿರುದ್ಧ ರಫ್ತುದಾರರಿಗೆ ರಕ್ಷಣೆ ದೊರೆಯುತ್ತದೆ.

**೨. ರಫ್ತು ರವಾನೆ ನಷ್ಟ ಸಂಭವ ರಾಜಕೀಯ ಬೆಳವಣಿಗೆ ವಿಮೆ (SHIPMENT POLITICAL RISKS POLICY)**

ಸರಕು ರವಾನೆಯಾದಂದಿನಿಂದ ರಫ್ತುದಾರನಿಗೆ ಗ್ರಾಹಕನ ದೇಶದಲ್ಲಿ ರಾಜಕೀಯ ಬೆಳವಣಿಗೆಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ರಕ್ಷಣೆ ದೊರೆಯುವುದು.

೩. ರಫ್ತು ಕರಾರು ವ್ಯಾಪಕ ನಷ್ಟ ಸಂಭವ ವಿಮೆ

ರಫ್ತು ಮಾಡಲು ಮಾಡಿಕೊಂಡ ಒಪ್ಪಂದದ ದಿನದಿಂದ ವಾಣಿಜ್ಯಕ ಕಾರಣಗಳಿಂದ ಅಥವಾ ಗ್ರಾಹಕನ ದೇಶದಲ್ಲಿ ಉಂಟಾಗಬಹುದಾದ ರಾಜಕೀಯ ಬೆಳವಣಿಗೆಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ರಕ್ಷಣೆ ದೊರೆಯುವುದು.

೪. ರಫ್ತು ಕರಾರು ನಷ್ಟ ರಾಜಕೀಯ ಬೆಳವಣಿಗೆ ಸಂಭವ ವಿಮೆ

ರಫ್ತು ಮಾಡಲು ಮಾಡಿಕೊಂಡ ಒಪ್ಪಂದದ ದಿನದಿಂದ ರಫ್ತುದಾರನಿಗೆ ಗ್ರಾಹಕನ ದೇಶದಲ್ಲಿಯ ರಾಜಕೀಯ ಬೆಳವಣಿಗೆಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ರಕ್ಷಣೆ ದೊರೆಯುವುದು.

ರಫ್ತು ಕರಾರು ವಿಮೆ ಮಾಡಿಸುವುದರಿಂದ ಗ್ರಾಹಕನ ಆದೇಶದಂತೆ ಅವನಿಗಾಗಿಯೇ ಸಿದ್ಧಪಡಿಸಿದ ಸರಕನ್ನು ಗ್ರಾಹಕ ನಿರಾಕರಿಸಿದಾಗ ಬೇರೆ ಗ್ರಾಹಕ ದೊರೆಯುವುದು ದುಸ್ತರವಾದಾಗ ರಫ್ತುದಾರನಿಗೆ ಸಂಭವಿಸಬಹುದಾದ ನಷ್ಟದ ವಿರುದ್ಧ ರಕ್ಷಣೆ ದೊರೆಯುತ್ತದೆ. ಒಪ್ಪಂದವಾದ ನಂತರ ಸರಕನ್ನು ರಫ್ತು ಮಾಡದಂತೆ ಸರಕಾರ ನಿರ್ಬಂಧ ವಿಧಿಸಿದರೆ ಅದರಿಂದಾಗುವ ನಷ್ಟವನ್ನು ತುಂಬಿಕೊಡಲಾಗುವುದು.

ರಫ್ತುದಾರರು ತಮ್ಮ ಸಮಗ್ರ ವಹಿವಾಟನ್ನೂ ವಿಮೆಗೆ ಒಳಪಡಿಸಬೇಕೆಂಬ ನಿಯಮವಿರುವುದಾದರೂ ಎಲ್ಲವನ್ನೂ ವ್ಯಾಪಕ ನಷ್ಟ ಸಂಭವದ ವಿರುದ್ಧವೇ ವಿಮೆ ಮಾಡಬೇಕೆಂಬ ನಿಯಮವೇನೂ ಇಲ್ಲ. ತಮ್ಮ ಅವಶ್ಯಕತೆಗೆ ತಕ್ಕಂತೆ ರಾಜಕೀಯ ಬೆಳವಣಿಗೆಗಳಿಂದುಂಟಾಗಬಹುದಾದ ನಷ್ಟದ ವಿರುದ್ಧ ಮಾತ್ರವೇ ಅಥವಾ ವ್ಯಾಪಕ ನಷ್ಟದ ವಿರುದ್ಧ ವಿಮೆ ಇಳಿಸಬಹುದು. ತಮ್ಮ ಸಹಯೋಗಿಗಳಿಗೆ ಅಥವಾ ಅಭಿಕರ್ತರಿಗೆ ಕಳುಹಿಸಲಾಗುವ ಸರಕುಗಳ ಮೇಲೆ ರಾಜಕೀಯ ಬೆಳವಣಿಗೆಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ಮಾತ್ರ ವಿಮೆ ಇಳಿಸಲಾಗುವುದು.

ವಾಣಿಜ್ಯಕ ಕಾರಣಗಳಿಂದ ಉಂಟಾಗುವ ನಷ್ಟ ಎಂದರೆ ಕೆಳಕಂಡ ಸಂದರ್ಭಗಳಲ್ಲಿ ರಫ್ತುದಾರರಿಗೆ ಉಂಟಾಗಬಹುದಾದ ನಷ್ಟ:

೧. ಗ್ರಾಹಕನ ದಿವಾಳಿತನ
೨. ಸರಕು ಸ್ವೀಕರಿಸಿದ ಗ್ರಾಹಕನಿಂದ ಉದ್ದೇಶಿತ ಬಾಕಿ ನಿಲ್ಲಿಸಿಕೊಳ್ಳುವಿಕೆ.
೩. ರಫ್ತು ದರ ನಿರ್ದೋಷಿಯಾಗಿದ್ದು ಗ್ರಾಹಕನಿಂದ ಸರಕಿನ ನಿರಾಕರಣೆ.

ರಾಜಕೀಯ ಬೆಳವಣಿಗೆಗಳಿಂದ ಉಂಟಾಗಬಹುದಾದ ನಷ್ಟ ಎಂದರೆ ಕಳೆಕಂಡ ಸಂದರ್ಭಗಳಲ್ಲಿ ರಫ್ತುದಾರನಿಗೆ ಉಂಟಾಗ-ಬಹುದಾದ ನಷ್ಟ:

೧. ಆಮದುದಾರನ ಸರಕಾರದಿಂದ ಪರದೇಶಕ್ಕೆ ಹಣ ರವಾನಿಸದಿರುವಂತೆ ನಿರ್ಬಂಧ ಅಥವಾ ರಫ್ತುದಾರನಿಗೆ ಹಣ ಪಾವತಿ ತಡ ಮಾಡುವಂತೆ ಯಾ ಪಾವತಿ ಮಾಡದಂತೆ ವಿಧಿಸಲಾದ ಸರ್ಕಾರದ ಆದೇಶ.
೨. ಆಮದುದಾರನ ದೇಶದಲ್ಲಿ ಯುದ್ಧ, ಕ್ರಾಂತಿ, ಪ್ರಜಾದಂಗೆ.
೩. ಆಮದುದಾರನ ದೇಶದಲ್ಲಿ ನೀಡಲಾದ ಆಮದು ಪರವಾನಗಿಯ ರದ್ದತಿ ಅಥವಾ ಹೆಚ್ಚಿನ ನಿರ್ಬಂಧ ಹೇರಿಕೆ.
೪. ರಫ್ತುದಾರನಿಗೆ ನೀಡಲಾಗಿದ್ದ ರಫ್ತು ಪರವಾನಗಿಯ ರದ್ದತಿ ಅಥವಾ ಹೊಸ ನಿರ್ಬಂಧಗಳ ಹೇರಿಕೆ.
೫. ಸರಕಿನ ವಿಚಲನಾ ರವಾನೆಯಿಂದ ಆಮದುದಾರನಿಂದ ವಸೂಲು ಮಾಡಲಾಗದಂತ ಸಾಗಣೆ ಹಾಗೂ ಇತರ ಹೆಚ್ಚಿನ ವೆಚ್ಚಗಳು.
೬. ವಾಣಿಜ್ಯ ವಿಮಾ ಕಂಪನಿಗಳು ವಿಮಾ ಸೌಲಭ್ಯ ನೀಡದ ರಫ್ತುದಾರನ ಅಥವಾ ಆಮದುದಾರನ ನಿಯಂತ್ರಣಕ್ಕೆ ಮೀರಿದ, ಭಾರತದ ಹೊರಗೆ ಸಂಭವಿಸಬಹುದಾದ ಯಾವುದೇ ಖರ್ಚಿನಿಂದ ಸಂಭವಿಸಬಹುದಾದ ನಷ್ಟ.

ರಫ್ತುದಾರನಿಗೆ ಈ ಕೆಳಗಿನ ಕಾರಣಗಳಿಂದ ಸಂಭವಿಸಬಹುದಾದ ನಷ್ಟದ ವಿರ್ದದ್ಧ ವಿಮಾ ರಕ್ಷಣೆ ದೊರೆಯುವುದಿಲ್ಲ:

೧. ರಫ್ತುದಾರ-ಆಮದುದಾರರ ನಡುವೆ ವಾಣಿಜ್ಯ ವಿವಾದವೇರ್ಪಟ್ಟು ರಫ್ತುದಾರ ಆಮದುದಾರನ ದೇಶದ ನ್ಯಾಯಾಲಯದಿಂದ ತನ್ನ ಪರವಾಗಿ ತೀರ್ಪು ತರಲು ವಿಫಲವಾದಾಗ ಆಗುವ ನಷ್ಟ.
೨. ಸರಕಿನ ಸ್ವಾಭಾವಿಕ ಗುಣಧರ್ಮದಿಂದ ಉಂಟಾಗುವ ನಷ್ಟ.
೩. ಆಮದುದಾರ ತನ್ನ ಸರಕಾರದಿಂದ ಪರವಾನಗಿ ಪಡೆಯಲು ವಿಫಲನಾದುದರಿಂದ ಉಂಟಾಗಬಹುದಾದ ನಷ್ಟ.
೪. ರಫ್ತುದಾರನ ಅಭಿಕರ್ತ ಅಥವಾ ಬ್ಯಾಂಕ್‌ನ ದಿವಾಳಿ-ತನದಿಂದ ಉಂಟಾಗುವ ನಷ್ಟ.
೫. ವಾಣಿಜ್ಯ ವಿಮಾ ಕಂಪನಿಗಳು ವಿಮಾ ಸೌಲಭ್ಯ ಒದಗಿಸುವ ಯಾವುದೇ ನಷ್ಟ ಸಂಭವದ ವಿರುದ್ಧ ವಿಮೆ ಮಾಡದಿರು-ವುದರಿಂದ ಸಂಭವಿಸಬಹುದಾದ ನಷ್ಟ.
೬. ವಿನಿಮಯ ದರದ ವ್ಯತ್ಯಾಸದಿಂದ ಸಂಭವಿಸುವ ನಷ್ಟ. ಈ ತೆರನ ನಷ್ಟಕ್ಕೆ ವಿನಿಮಯ ವ್ಯತ್ಯಾಸ ನಷ್ಟ ಸಂಭವದ ವಿರುದ್ದ ವಿಮೆ ಮಾಡಿಸಿರುವವರಿಗೆ ಕೆಲವು ಗರಿಷ್ಠ ಮಿತಿಗೊಳಪಟ್ಟು ರಕ್ಷಣೆ ದೊರೆಯುತ್ತದೆ.

ರಫ್ತುದಾರರಿಗೆ ಸಂಭವಿಸುವ ನಷ್ಟವನ್ನು ತುಂಬಿ ಕೊಡುವುದು ನಿಗಮದ ಮೂಲೋದ್ದೇಶವಾದರೂ ನಷ್ಟದ ಸ್ವಲ್ಪ ಭಾಗವನ್ನು ರಪ್ಫುದಾರರೂ ಭರಿಸಬೇಕೆಂಬುದು ವಿಶ್ವದೆಲ್ಲೆಡೆ ನಡೆದು ಬಂದ ಸಂಪ್ರದಾಯ. ಹಾಗಾಗಿ ಮೇಲಿನ ಎಲ್ಲ ಸಂದರ್ಭಗಳಲ್ಲಿಯೂ ನಷ್ಟದ ಪ್ರತಿಶತ ೯೦ ರಷ್ಟನ್ನು ಮಾತ್ರ ನಿಗಮ ತುಂಬಿಕೊಡುತ್ತದೆ.

ಈ ಮೊದಲೇ ತಿಳಿಸಿದಂತೆ ರಫ್ತುದಾರ ತನ್ನ ಸಂಪೂರ್ಣ ವಹಿವಾಟನ್ನು ವಿಮೆ ಮಾಡಿಸಬೇಕು. ವಿಮಾ ಶುಲ್ಕ ಆಮದುದಾರನ ದೇಶದ ಮೇಲೆ ಹಾಗೂ ಪಾವತಿಯ ಷರತ್ತುಗಳ ಮೇಲೆ

ಅವಲಂಬಿತವಾಗಿದೆ. ಪ್ರತಿ ತಿಂಗಳೂ ರಫ್ತುದಾರರು ತಾವು ಮಾಡಿಕೊಂಡ ರಫ್ತು ಕರಾರುಗಳನ್ನು ಹಾಗೂ ಸರಕು ರವಾನೆಯ ವಿವರಗಳನ್ನು ವಿಮಾ ಶುಲ್ಕದೊಡನೆ ನಿಗಮದ ಕಛೇರಿಗೆ ಸಲ್ಲಿಸುವುದರ ಮೂಲಕ ವಿಮಾ ರಕ್ಷಣೆ ಪಡೆಯಬಹುದು.

ಹಣ ಪಾವತಿಯಾಗಬೇಕಾದ ದಿನದಿಂದ ೩೦ ದಿನಗಳೊಳಗಾಗಿ ಹಣ ಪಾವತಿಯಾಗದಿದ್ದಲ್ಲಿ ನಿರ್ದಿಷ್ಟ ನಮೂನೆಯಲ್ಲಿ ನಿಗಮಕ್ಕೆ ಅರ್ಜಿ ಸಲ್ಲಿಸಬೇಕು. ಆಮದುದಾರನಿಗೆ ಪಾವತಿ ಮಾಡಲು ಹೆಚ್ಚಿನ ಕಾಲಾವಧಿ ನೀಡುವುದಾಗಲೀ ಬೆಲೆ ಕಡಿಮೆ ಮಾಡುವುದಾಗಲೀ ಅಥವಾ ಯಾವುದೇ ತೆರನ ರಿಯಾಯಿತಿ ತೋರಿಸುವ ಉದ್ದೇಶವಿದ್ದಲ್ಲಿ ನಿಗಮದ ಪೂರ್ವಾನುಮತಿ ಪಡೆಯುವುದು ಅತ್ಯಗತ್ಯ. ನಂತರ ವಿಮಾಕರ್ತರು ತಮ್ಮ ಹಕ್ಕುದಾವೆಗಳನ್ನು ಸಲ್ಲಿಸಬಹುದು. ಕೆಲವು ಸಂದರ್ಭಗಳನ್ನುಳಿದು ನಾಲ್ಕು ತಿಂಗಳುಗಳೊಳಗೆ ನಷ್ಟವನ್ನು ನಿಗಮ ತುಂಬಿಕೊಡುವುದು.

ಮೇಲೆ ವಿವರಿಸಿದ ವಿಮಾ ಯೋಜನೆಗಳು ರಫ್ತುದಾರರು ನಿರಂತರವಾಗಿ ಸರಬರಾಜು ಮಾಡುವ ಕಚ್ಚಾ ಸಾಮಗ್ರಿಗಳ ಅಲ್ಪಕಾಲೀನ ಹಾಗೂ ದೀರ್ಘಕಾಲೀನ ಉಪಭೋಗಿ ವಸ್ತುಗಳ ಸಮಗ್ರ ವಹಿವಾಟಿಗೆ ವಿಮಾ ರಕ್ಷಣೆ ಒದಗಿಸುತ್ತವೆ. ಪರದೇಶಗಳಲ್ಲಿ ಯಂತ್ರ ಸ್ಥಾವರಗಳ ಸ್ಥಾಪನೆ, ಕಾಮಗಾರಿಗಳನ್ನು ಕೈಗೊಳ್ಳುವಿಕೆ ಮುಂತಾದವುಗಳಲ್ಲಿ ಸಂಭವಿಸಬಹುದಾದ ನಷ್ಟದ ವಿರುದ್ಧ ವಿಮಾ ರಕ್ಷಣೆಯನ್ನು ನಿರ್ದಿಷ್ಟ ಯೋಜನೆಗಳ ಮೂಲಕ ನಿಗಮ ಒದಗಿಸುತ್ತದೆ.

ಭಾರತೀಯ ತಂತ್ರಜ್ಞರು, ಸಂಸ್ಥೆಗಳು, ಪರದೇಶಗಳಲ್ಲಿನ ಜನರಿಗೆ ಹಾಗೂ ಸಂಸ್ಥೆಗಳಿಗೆ ಸಲ್ಲಿಸುವ ವಿಶೇಷ ಸೇವೆಗಳಿಗೆ ಸಲ್ಲಬೇಕಾದ ಸೇವಾ ಶುಲ್ಕದ ಪಾವತಿಗೂ ವಿಮಾ ರಕ್ಷಣೆಯನ್ನು ನಿಗಮ ಒದಗಿಸುತ್ತದೆ.

ರಫ್ತುದಾರರು ತಮ್ಮ ಗ್ರಾಹಕರಿಗೆ ಉದರಿ ಸೌಲಭ್ಯ ಕೊಡಬೇಕಾದರೆ ಅವರಿಗೆ ಸ್ಥಳೀಯ ಬ್ಯಾಂಕ್‌ಗಳಿಂದ ಉದರಿ ಸಿಗುವಂತಿರಬೇಕು. ಭಾರತೀಯ ಬ್ಯಾಂಕ್ ಗಳು ರಫ್ತುದಾರರಿಗೆ ಧಾರಾಳವಾಗಿ ಧನಸಹಾಯ ನೀಡಲು ಮುಂದೆ ಬರುವಂತೆ ನಿಗಮ ಬ್ಯಾಂಕ್‌ಗಳಿಗೆ ಆರ್ಥಿಕ ಖಾತರಿ ನೀಡುತ್ತದೆ.

ಬ್ಯಾಂಕ್‌ಗಳು ರಫ್ತುದಾರರಿಗೆ ನೀಡುವ ಐದು ಬಗೆಯ ಉದರಿ ಸೌಲಭ್ಯಗಳಿಂದ ಉಂಟಾಗಬಹುದಾದ ನಷ್ಟದ ವಿರುದ್ಧ ಖಾತರಿ ನೀಡುತ್ತದೆ. ರಫ್ತು ಉದರಿ ಖಾತರಿ ನಿಗಮ ಹೀಗೆ ತುಂಬಿಕೊಡುವ ನಷ್ಟದ ಪ್ರಮಾಣ ಪ್ರತಿಶತ ೬೬ ರಿಂದ ೭೫ರವರೆಗೆ ಇದೆ.

**ರಫ್ತು ಸಿದ್ಧತಾ ಉದರಿಗೆ ಖಾತರಿ (Packing Credit Guarantee)**

ರಫ್ತು ಮಾಡಬೇಕಾದ ಸಾಮಗ್ರಿಯನ್ನು ಸ್ಥಳೀಯವಾಗಿ ಖರೀದಿಸಲು ಅದನ್ನು ರಫ್ತು ಯೋಗ್ಯವನ್ನಾಗಿ ಪರಿವರ್ತಿಸಲು ತಗಲುವ ವೆಚ್ಚವನ್ನು ಭರಿಸಲು ನೀಡುವ ಸಾಲವೇ ರಫ್ತು ಸಿದ್ಧತಾ ಉದರಿ. ಇದು ಕಚ್ಚಾ ಸಾಮಗ್ರಿಯ ಬೆಲೆ ಇರಬಹುದು. ಕೆಲಸಗಾರರಿಗೆ ಕೊಡುವ ಕೂಲಿಯನ್ನು ಒಳಗೊಂಡಿರಬಹುದು. ಈ ಉದರಿ ಕೊಡುವ ಮುಂಚೆ ಸರಕನ್ನು ಸರಬರಾಜು ಮಾಡಲು ರಫ್ತುದಾರ ನಿಶ್ಚಿತ ಆದೇಶ ಪತ್ರ ಅಥವಾ ಉದರಿ ಖಾತರಿ ಪತ್ರ (ಲೆಟರ್ ಆಫ್ ಕ್ರೆಡಿಟ್) ಪಡೆದಿರಬೇಕು. ಆತ ಆಮದುದಾರನಿಂದ ಪಡೆದಿರಬಹುದಾದ ಯಾವುದೇ ಮುಂಗಡಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಉಳಿದ ವೆಚ್ಚಕ್ಕೆ ಮಾತ್ರ ಸಾಲ ಸೀಮಿತವಾಗಿರತಕ್ಕದ್ದು. ಪರದೇಶಗಳಲ್ಲಿ ಕಾಮಗಾರಿಗಳನ್ನು ಕೈಗೊಳ್ಳುವ ಸೇವಾ ಸೌಲಭ್ಯ ಒದಗಿಸುವ ರಫ್ತುದಾರರು ವ್ಯಯಿಸದ ಪೂರ್ವಭಾವಿ ವೆಚ್ಚವನ್ನು ಭರಿಸಲು ಬ್ಯಾಂಕ್ ನೀಡಾದ ಸಾಲಕ್ಕೂ ಈ ಖಾತರಿಯ ರಕ್ಷಣೆ ದೊರೆಯುತ್ತದೆ.

ತಮ್ಮಲ್ಲಿ ಎಲ್ಲಾ ರಫ್ತು ಸಿದ್ಧತೆಗಾಗಿ ಉದರಿಯ ಖಾತೆಗಳ ಮೇಲೆ ಖಾತರಿ ಸೌಲಭ್ಯ ಪಡೆಯುವ ಬ್ಯಾಂಕು ಗಳಿಗೆ ಖಾತರಿ ಶುಲ್ಕದಲ್ಲಿ ಕಡಿತದ ಜೊತೆಗೆ ಸಂಭವಿಸಿದ ಹಾನಿಯ ಪ್ರತಿಶತ ೭೫ ರಷ್ಟನ್ನು ನಿಗಮ ತುಂಬಿಕೊಡುವುದು. ಎಲ್ಲಾ ಖಾತೆಗಳನ್ನೂ ಖಾತರಿಗೆ ಒಳಪಡಿಸದಿದ್ದಲ್ಲಿ ಆದ ಹಾನಿಯ ಶೇ. ೬೬.೬೬ ರಷ್ಟನ್ನು ಮಾತ್ರ ನಿಗಮ ತುಂಬಿಕೊಡುವುದು.

**ನಿರ್ಯಾತ ಉತ್ಪಾದನಾ ಉದರಿಗೆ ಖಾತರಿ (Export Production Finance Guarantee)**

ಕೆಲವು ಸಂದರ್ಭಗಳಲ್ಲಿ ರಫ್ತು ಮಾಡುವ ಸರಕಿನ ಬೆಲೆ ಆಂತರಿಕ ಮಾರುಕಟ್ಟೆಯಲ್ಲಿ ಪರದೇಶದಲ್ಲಿ ದೊರೆಯುವ ಬೆಲೆಗಿಂತ ಹೆಚ್ಚಿರಬಹುದು. ರಫ್ತು ಮಾಡಲು ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಸರಕಾರ ಸಹಾಯಧನ, ಉತ್ತೇಜನ ಧನ ನೀಡುವ ಮೂಲಕ ಈ ಅಂತರವನ್ನು ತುಂಬಬಹುದು.

ಇಂತಹ ಸಂದರ್ಭಗಳಲ್ಲಿ ಬ್ಯಾಂಕ್ ರಫ್ತಿನಿಂದ ದೊರೆಯ-ಬಹುದಾದ ಹಣಕ್ಕಿಂತ ಹೆಚ್ಚಿನ ಉದರಿ ನೀಡಬಹುದು. ಈ ರೀತಿ ನೀಡಲಾದ ಸಾಲ ಸೌಲಭ್ಯಗಳಿಗೂ ನಿಗಮ ಖಾತರಿ ನೀಡುತ್ತವೆ.

**ಸರಕು ರವಾನೆ ನಂತರದ ರಫ್ತು ಉದರಿಗೆ ಖಾತರಿ (Post Shipment Export Credit Guarantee)**

ರಫ್ತುದಾರ ನಿಶ್ಚಿತ ಸರಕನ್ನು ಸಾಗಣೆದಾರನ ವಶಕ್ಕೆ ಒಪ್ಪಿಸಿದ ನಂತರ ಅದಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಆಮದುದಾರನಿಗೆ ಕಳುಹಿಸಬೇಕಾಗುತ್ತದೆ. ಆ ಕಾಗದ ಪತ್ರಗಳು ಅವನಿಗೆ ತಲುಪಿ ಅವನು ಪಾವತಿ ಮಾಡಿದ ಹಣ ರಫ್ತುದಾರನನ್ನು ತಲುಪಲು ಸಾಕಷ್ಟು ಸಮಯ ತಗಲುತ್ತದೆ. ಮಾರಾಟದ ಷರತ್ತಿನಲ್ಲಿ ರಫ್ತುದಾರ ಉದರಿ ಕೊಡಲು ಒಪ್ಪಿದ್ದರೆ ಮತ್ತಷ್ಟು ಕಾಲ ಕಾಯಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಬಂಧಿಸಿದ ಕಾಗದ ಪತ್ರಗಳ ಆಧಾರದ ಮೇಲೆ ಧನಸಹಾಯ ಮಾಡಬಹುದು. ಇಲ್ಲವೇ ಆಮದುದಾರನ ಮೇಲೆ ರಚಿತವಾದ ಹುಂಡಿಗಳನ್ನು ಕೊಳ್ಳಬಹುದು, ಇಲ್ಲವೇ ವಟಾಯಿಸಬಹುದು. ಈ ರೀತಿಯ ಧನ ಸಹಾಯದಿಂದ ಬ್ಯಾಂಕುಗಳಿಗೆ ಸಂಭವಿಸಬಹುದಾದ ನಷ್ಟದ ವಿರುದ್ಧ ನಿಗಮ ಖಾತರಿ ನೀಡು

ತ್ತದೆ. ತನ್ನೆಲ್ಲ ಖಾತೆಗಳನ್ನು ಖಾತರಿಗೆ ಒಳಪಡಿಸುವ ಬ್ಯಾಂಕ್‌ಗಳಿಗೆ ಹಾನಿಯ ಪ್ರತಿಶತ ೮೫ ರಷ್ಟನ್ನು ಉಳಿದ ಬ್ಯಾಂಕ್‌ಗಳಿಗೆ ಹಾನಿಯ ಪ್ರತಿಶತ ೬೦ ರಷ್ಟನ್ನು ನಿಗಮ ತುಂಬಿಕೊಡುತ್ತದೆ.

**ರಫ್ತು ಉದರಿಗೆ ಖಾತರಿ**

ಸರಕಿನ ರವಾನೆ ನಂತರ ರಫ್ತುದಾರನಿಗೆ ಸರಕಾರದಿಂದ ಬರಬಹುದಾದ ಉತ್ತೇಜನ ಧನ, ಸುಂಕದ ಮರುಪಾವತಿಯ ವಿರುದ್ಧ ನೀಡಲಾಗುವ ಸಾಲ ಸೌಲಭ್ಯದಿಂದ ಬ್ಯಾಂಕ್‌ಗಳಿಗೆ ಉಂಟಾಗಬಹುದಾದ ನಷ್ಟದ ವಿರುದ್ಧ ನಿಗಮ ಖಾತರಿ ನೀಡುತ್ತದೆ.

**ರಫ್ತು ನಿರ್ವಹಣಾ ಸಾಮರ್ಥ್ಯದ ಬಗ್ಗೆ ನೀಡುವ ಖಾತರಿಗೆ ಖಾತರಿ**

ರಫ್ತುದಾರರೊಡನೆ ರಫ್ತು ಒಪ್ಪಂದ ಮಾಡಿಕೊಳ್ಳುವುದಕ್ಕೆ ಮುಂಚೆ ರಫ್ತುದಾರರು ನಿರ್ದಿಷ್ಟ ಅವಧಿಯೊಳಗಾಗಿ, ನಿರ್ದಿಷ್ಟಪಡಿಸಿದ ಸರಕನ್ನು ರವಾನಿಸಲು ಅಸಮರ್ಥವಾದಲ್ಲಿ ತನಗೆ ಉಂಟಾಗಬಹುದಾದ ನಷ್ಟವನ್ನು ನಿವಾರಿಸಿಕೊಳ್ಳಲು ಬ್ಯಾಂಕ್ ಒಂದರಿಂದ ರಫ್ತುದಾರ ತನ್ನ ಪಾಲಿನ ಒಪ್ಪಂದವನ್ನು ಪಾಲಿಸದಿದ್ದಲ್ಲಿ ನಿರ್ದಿಷ್ಟ ಮೊತ್ತದ ಹಣ ನೀಡುವ ಖಾತರಿಯೊಂದನ್ನು ಕೇಳಬಹುದು.

ಜಾಗತಿಕ ದರಖಾಸ್ತುಗಳನ್ನು ತುಂಬುವಾಗ ಈ ರೀತಿಯ ಕೋರಿಕೆ ಸಾಮಾನ್ಯ. ಇಂತಹ ಸಂದರ್ಭಗಳಲ್ಲಿ ಬ್ಯಾಂಕ್ ನೀಡುವ ಖಾತರಿಗಳಿಂದ ಉಂಟಾಗುವ ಹಾನಿಯನ್ನು ನಿಗಮ ತುಂಬಿಕೊಡುತ್ತದೆ. ಸಂಭವಿಸಿದ ನಷ್ಟದ ಪ್ರತಿಶತ ೭೫ ರಿಂದ ೯೦ ರಷ್ಟನ್ನು ನಿಗಮ ತುಂಬಿಕೊಡುತ್ತದೆ.

**ವಿಶೇಷ ಯೋಜನೆಗಳು**

ರಫ್ತು ಉದರಿ ಖಾತರಿ ನಿಗಮ ಮೇಲೆ ವಿವರಿಸಿದ ವಿಮಾ ರಕ್ಷಣೆ, ಖಾತರಿಗಳನ್ನಲ್ಲದೆ ವಿದೇಶಿ ಬ್ಯಾಂಕುಗಳಿಗೆ ನೀಡುವ ಉದರಿ ಖಾತರಿ ಪತ್ರಕ್ಕೆ ತಮ್ಮ ಸಮ್ಮತಿ ಸೂಚಿಸುವ ಭಾರತೀಯ ಬ್ಯಾಂಕ್‌ಗಳಿಗೆ ಅದರಿಂದ ಉಂಟಾಗಬಹುದಾದ ಹಾನಿಯನ್ನೂ, ಇಲ್ಲಿಯ ಸರಕನ್ನು ಕೊಳ್ಳಲು ಅನುಕೂಲವಾಗುವಂತೆ ಆಮದುದಾರನಿಗೆ ನೀಡುವ ಸಾಲ ಸೌಲಭ್ಯದಿಂದ ಉಂಟಾಗುವ ಹಾನಿಯನ್ನೂ, ವಿದೇಶಗಳಲ್ಲಿ ಬಂಡವಾಳ ಹೂಡುವ ಇಲ್ಲಿಯ ಉದ್ಯಮಶೀಲರಿಗೆ ತಮ್ಮ ಬಂಡವಾಳದ ಮರುಪಾವತಿಯಾಗದಿರುವ, ಲಾಭಾಂಶ ಪಾವತಿಯಾಗದಿರುವ ಸಂದರ್ಭದಲ್ಲಿ ಸಂಭವಿಸುವ ನಷ್ಟವನ್ನೂ ತುಂಬಿಕೊಡಲು ನಿಗಮದ ರಕ್ಷಣೆ ದೊರೆಯುತ್ತದೆ.

ಸಾಮಾನ್ಯವಾಗಿ ವಿನಿಮಯ ದರದ ಏರಿಳಿತದಿಂದ ಉಂಟಾಗುವ ನಷ್ಟಕ್ಕೆ ನಿಗಮ ವಿಮೆ ಇಳಿಸುವುದಿಲ್ಲ. ಆದರೆ ಜಾಗತಿಕ ದರಖಾಸ್ತುಗಳಲ್ಲಿ ಭಾಗವಹಿಸುವವರ ಅನುಕೂಲಕ್ಕಾಗಿ ವಿಶೇಷ ಯೋಜನೆಯೊಂದರ ಮೂಲಕ ವಿಮಾ ರಕ್ಷಣೆ ಒದಗಿಸುತ್ತದೆ. ಈ ರಕ್ಷಣೆ ಕೆಲವು ನಿರ್ದಿಷ್ಟ ವಿದೇಶ ನಾಣ್ಯಗಳಿಗೆ ಮಾತ್ರ ದೊರೆಯುವುದಲ್ಲದೆ ಏರಿಳಿತ ಶೇ. ೩೫ಕ್ಕಿಂತ ಹೆಚ್ಚಾದಲ್ಲಿ ವಿಮಾ ರಕ್ಷಣೆ ದೊರೆಯದು.

*ಬ್ಯಾಂಕಿಂಗ್ ಪ್ರಪಂಚ – ಅಕ್ಟೋಬರ್ ೧೯೮೩*

# ಬ್ಯಾಂಕ್ ಸಾಲಕ್ಕೆ ಆಧಾರಗಳು

ಕೆ. ಆರ್. ಸುಧೀಂದ್ರ

ವಿಶಾಲ ದೃಷ್ಟಿಯಲ್ಲಿ ಸ್ವಯಂ ಸಾಲಗಾರನೇ ಸಾಲಕ್ಕೆ ಮೂಲಾಧಾರ. ಇಂದಿಗೂ ಇಂಗ್ಲೆಂಡಿನಲ್ಲಿ ಸಾಲ ಕೊಡುವಾಗ ಮುಖ್ಯವಾಗಿ ವ್ಯಕ್ತಿಯ ಪ್ರಾಮಾಣಿಕತೆಗೆ ಆದ್ಯತೆ ನೀಡಲಾಗುತ್ತದೆ. ಪ್ರಾಮಾಣಿಕನೊಬ್ಬ ತನ್ನ ಗೌರವ ಘನತೆಗಳನ್ನು ಕಾಪಾಡಿಕೊಳ್ಳಲು ಸಾಲ ತೀರಿಸುವ ಸಾಧ್ಯತೆ ಹೆಚ್ಚೇ.

ಸಾಲಗಾರನ ವೈಯಕ್ತಿಕ ಪ್ರತಿಭೂತಿಯಲ್ಲದೆ ಬೇರೆ ವ್ಯಕ್ತಿಯ, ವ್ಯಕ್ತಿಗಳ ಜಂಟಿ ಹೊಣೆಗಾರಿಕೆಯ ಅಥವಾ ಖಾತರಿಯ ರೂಪದಲ್ಲಿ ಆಧಾರವನ್ನೂ ಪಡೆಯಲಾಗುತ್ತದೆ. ಅವರು ಸಾಲವನ್ನು ತೆರಲು ಸಾಲಗಾರನಷ್ಟೇ ಬದ್ಧರಾಗಿರುತ್ತಾರೆ.

ಇಂದಿನ ವ್ಯಾಪಕ ಬ್ಯಾಂಕಿಂಗ್ ಚಟುವಟಿಕೆಗಳಲ್ಲಿ ಸಾಲಗಾರರ ಸಂಖ್ಯೆ ಮತ್ತು ವೈವಿಧ್ಯಗಳು ಹೆಚ್ಚಿರುವುದರಿಂದ ಸಾಲಗಾರನ ಪ್ರಾಮಾಣಿಕತೆಯನ್ನಷ್ಟೇ ಗುರುತಿಸಿ ಸಾಲ ನೀಡುವುದು ಸುಲಭವಲ್ಲ. ಹಾಗೂ ಜಂಟಿ ಹೊಣೆದಾರರು ಅಥವಾ ಖಾತರಿದಾರರನ್ನಷ್ಟೇ ಅವಲಂಬಿಸುವುದೂ ಕೆಲವು ಸಂದರ್ಭಗಳಲ್ಲಿ ಸಾಕೆನಿಸದು. ಅಂತಹ ಸಂದರ್ಭಗಳಲ್ಲಿ ಸ್ಪಷ್ಟವಾದ ಮತ್ತು ಸ್ಫುಟವಾದ ಪ್ರತಿಭೂತಿಗಳನ್ನು ಪಡೆಯಬೇಕಾಗುತ್ತದೆ. ಈ ರೀತಿಯ ಪ್ರತಿಭೂತಿಗಳನ್ನು ಆನುಷಂಗಿಕ ಪ್ರತಿಭೂತಿಗಳೆಂದು ಕರೆಯಬಹುದು.

ಆನುಷಂಗಿಕ ಪ್ರತಿಭೂತಿಗಳು ವಿವಿಧ ಬಗೆಗಳಾಗಿವೆ. ಅವಾವುವೆಂದರೆ – ಅಡವು, ನೈಷೇಧಿಕ ಒಜ್ಜೆ, ಒತ್ತೆ, ತೋರಾಧಾರ, ಒಜ್ಜೆ ಮತ್ತು ನಿಯೋಜನೆ.

### ಅಡವು

ಆಸ್ತಿ ವರ್ಗಾವಣೆ ಅಧಿನಿಯಮದಲ್ಲಿ ಆರು ಬಗೆಯ ಅಡವುಗಳನ್ನು ಹೆಸರಿಸಲಾಗಿದೆ. ಬ್ಯಾಂಕುಗಳು ಸಾಮಾನ್ಯವಾಗಿ ಎರಡು ಬಗೆಯ ಅಡವುಗಳನ್ನು ಪ್ರತಿಭೂತಿಯ ಸಲುವಾಗಿ ಪಡೆಯುತ್ತವೆ. ಅವುಗಳು ಸರಳ ಅಡವು ಮತ್ತು ಹಕ್ಕು ಪತ್ರಗಳ ಠೇವಣಿಯಿಂದಾಗುವ ಅಡವು.

ಸರಳ ಅಡವನ್ನು ನೋಂದಾಯಿತ ಅಡವೆಂದೂ, ಕಾನೂನುಬದ್ಧ ಅಡವೆಂದೂ ವ್ಯವಹರಿಸುವುದುಂಟು. ಈ ಅಡವಿಗೆ ಸಂಬಂಧಪಟ್ಟ ಒಪ್ಪಂದದ ವಿವರಗಳನ್ನು ಛಾಪಾ ಕಾಗದದಲ್ಲಿ ಬರೆದು ನೋಂದಾಯಿಸಬೇಕು.

ಹಕ್ಕು ಪತ್ರಗಳ ಠೇವಣಿಯಿಂದಾಗುವ ಅಡವನ್ನು ಸಾಮ್ಯ ಅಡವೆಂದೂ ವ್ಯವಹರಿಸಲಾಗುತ್ತದೆ. ಸಾಲಗಾರ ಸಾಲದ ಹಣದ ಮರುಪಾವತಿಯ ಭದ್ರತೆಯ ದೃಷ್ಟಿಯಿಂದ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿನ ಮುತಾಲಿಕರಲ್ಲಿ ತನ್ನ ಆಸ್ತಿಗೆ ಸಂಬಂಧಿಸಿದ ಹಕ್ಕು ಪತ್ರಗಳನ್ನು ಇರಿಸಿದಲ್ಲಿ ಕೇವಲ ಆ ಇರಿಸುವಿಕೆಯಿಂದಲೇ ಈ ಬಗೆಯ ಅಡವು ಅಸ್ತಿತ್ವಕ್ಕೆ ಬರುತ್ತದೆ. ಈ ಅಡುವಿನ ಬಗ್ಗೆ ಯಾವುದೇ ರೀತಿಯ ಒಪ್ಪಂದವನ್ನು ಉಲ್ಲೇಖಿಸಬಾರದು. ಆದರೆ ಹಕ್ಕು ಪತ್ರಗಳನ್ನು ಇರಿಸಿದ ಸಂಗತಿಯನ್ನು ಮಾತ್ರ ಜ್ಞಾಪನಪತ್ರವೊಂದರಲ್ಲಿ ದಾಖಲು ಮಾಡಬಹುದು. ಈ ಜ್ಞಾಪನ ಪತ್ರವನ್ನು ಇಷ್ಟಪಟ್ಟಲ್ಲಿ ನೋಂದಾಯಿಸಲು ಅವಕಾಶವಿದೆ. ಸರಳ ಅಡವಿಗೆ ತಗಲುವಂತೆ ಸ್ಟ್ಯಾಂಪ್ ಶುಲ್ಕ ಮತ್ತು ನೋಂದಾವಣೆಯ ಖರ್ಚು ಈ ಬಗೆಯ ಅಡವಿಗೆ ತಗಲುವುದಿಲ್ಲವಾದುದರಿಂದ ಇದು ಹೆಚ್ಚು ಬಳಕೆಯಲ್ಲಿದೆ. ಮೇಲೆ ಹೇಳಿದ ಎರಡು ಬಗೆಯ ಅಡವುಗಳಲ್ಲೂ ಅಡವಿಗೆ ಈಡಾದ ಸ್ವತ್ತನ್ನು ಮಾರಾಟಕ್ಕೊಳಪಡಿಸಿ ನ್ಯಾಯಾಲಯದ ಮೂಲಕವೇ ಕ್ರಮ ಜರುಗಿಸಬೇಕು.

### ನೈಷೇಧಿಕ ಒಜ್ಜೆ

ಕರಾರುವಕ್ಕಾಗಿ ಹೇಳಬೇಕಾದರೆ ಇದು ಯಾವ ರೀತಿಯಲ್ಲೂ ಸ್ವತ್ತಿನ ಮೇಲೆ ಪ್ರಭಾರವನ್ನಂಟು ಮಾಡುವುದಿಲ್ಲ. ಸಾಲಗಾರ ಸಾಲ ತೀರುವ ತನಕ ತನ್ನ ಸ್ವತ್ತನ್ನು ಯಾವ ರೀತಿಯಲ್ಲಿಯೂ ಪರಭಾರೆ ಮಾಡುವುದಿಲ್ಲವೆಂದು ಲಿಖಿತ ಮುಚ್ಚಳಿಕೆ ಬರೆದುಕೊಟ್ಟರೆ ಅದು ನಿಷೇಧಾತ್ಮಕ ಒಜ್ಜೆಯೆಂದು ಪರಿಗಣಿಸಲ್ಪಡುತ್ತದೆ. ಬ್ಯಾಂಕು ಸಾಲದ ವಸೂಲಿಗೆ ಕ್ರಮ ಕೈಗೊಂಡಲ್ಲಿ ಒಜ್ಜೆಗೆ ಒಳಪಟ್ಟ ಸ್ವತ್ತಿನ ಪರಭಾರೆಯಾಗದಂತೆ ಸಾಲಗಾರನ ವಿರುದ್ಧ ನ್ಯಾಯಾಲಯದ ಆಜ್ಞೆಯನ್ನು ಪಡೆಯಲು ಇದು ಸಹಾಯಕವಾಗುವುದು.

### ಒತ್ತೆ

ಚಿನ್ನದ ಆಭರಣಗಳನ್ನು ಬ್ಯಾಂಕಿನ ಸುಪರ್ದಿಗೊಪ್ಪಿಸಿ ಅವುಗಳ ಆಧಾರದ ಮೇರೆಗೆ ಸಾಲ ಪಡೆಯುವುದು ಒತ್ತೆಯ ಒಂದು ಸಾಮಾನ್ಯ ನಿದರ್ಶನವಾಗಿದೆ. ಒತ್ತೆಯ ಮುಖ್ಯ ಲಕ್ಷಣವೇನೆಂದರೆ, ಒತ್ತೆಗೊಳಪಟ್ಟ ವಸ್ತು ಬ್ಯಾಂಕಿನ ಸುಪರ್ದಿನಲ್ಲೇ ಇರುವುದು. ನಗದು ಉದರಿ ಸೌಲಭ್ಯಗಳಿಗೆ ಬ್ಯಾಂಕುಗಳಲ್ಲಿ ವ್ಯಾಪಾರಿಗಳು ತಮ್ಮ ಸರಕನ್ನು ಒತ್ತೆಯಿಡುವುದುಂಟು. ಸಾಲದ ಖಾತೆಯಲ್ಲಿ ಅವರು ಧನಿಸಿದ ಮೊತ್ತಕ್ಕೆ ಅನುಸಾರವಾಗಿ ಸರಕನ್ನು ವ್ಯಾಪಾರಕ್ಕಾಗಿ ಬಿಡುಗಡೆ ಮಾಡಲಾಗುತ್ತದೆ. ಆಧಾರವಾದ ಸರಕು ಬ್ಯಾಂಕಿನ ಸುಪರ್ದಿನಲ್ಲೇ ಇರುವುದರಿಂದ ಆ ಸರಕನ್ನು ಮಾರಾಟ ಮಾಡಿ ಹಣವನ್ನು ಪಡೆದುಕೊಳ್ಳುವ ಸೌಲಭ್ಯ ಬ್ಯಾಂಕಿಗೆ ಒದಗುತ್ತದೆ. ಈ ಸಂಬಂಧದ ಷರತ್ತುಗಳನ್ನು ಒಪ್ಪಂದ ಪತ್ರದಲ್ಲಿ

ಅಳವಡಿಸಲಾಗುತ್ತದೆ ಹಾಗೂ ಭಾರತೀಯ ಕರಾರು ಅಧಿನಿಯಮದಲ್ಲಿ ಈ ಸಂಬಂಧದ ಹಕ್ಕುಗಳು ನಿರ್ದೇಶಿಸಲ್ಪಟ್ಟಿವೆ.

### ತೋರಾಧಾರ

ಬ್ಯಾಂಕಿನ ಸುಪರ್ದು ಒಂದನ್ನು ಬಿಟ್ಟರೆ ಇದು ಒತ್ತೆಯ ಎಲ್ಲಾ ಲಕ್ಷಣಗಳನ್ನೂ ಹೊಂದಿದೆ. ತೋರಾಧಾರಕ್ಕೆ ಒಳಗಾದ ವಸ್ತುವು ಸಾಲಗಾರನ ವಶದಲ್ಲೇ ಉಳಿದು ಅವನ ವ್ಯಾಪಾರ ಅಥವಾ ಉದ್ಯಮಕ್ಕೆ ಬಳಸಲು ಒದಗುವುದರಿಂದ ಇದು ಅನುಕೂಲಕರವಾಗುತ್ತದೆ. ಇಂದು ಹೆಚ್ಚಿನ ಬ್ಯಾಂಕ್ ಸಾಲಗಳು ವ್ಯಾಪಾರದ ಸರಕು, ಯಂತ್ರೋಪಕರಣಗಳು ಮೋಟಾರು ವಾಹನಗಳು ಬೆಳೆ ಜಾನುವಾರುಗಳು ಪುಸ್ತಕ ಋಣಗಳು ಮುಂತಾದ ಚರಸ್ವತ್ತುಗಳ ತೋರಾಧಾರದ ಮೇಲೆ ನೀಡಲ್ಪಡುತ್ತವೆ. ತೋರಾಧಾರದ ಒಪ್ಪಂದ ಪತ್ರದಲ್ಲಿ ಪ್ರತಿಭೂತಿಯನ್ನು ಯಾವ ಕ್ಷಣದಲ್ಲಾದರೂ ವಶಕ್ಕೆ ತೆಗೆದುಕೊಂಡು ಮಾರಾಟ ಮಾಡುವ ಹಕ್ಕನ್ನು ಬ್ಯಾಂಕಿಗೆ ನೀಡಲಾಗುತ್ತದೆ.

ತೋರಾಧಾರಕ್ಕೆ ಒಳಪಟ್ಟ ವಿಶಿಷ್ಟ ವಸ್ತುಗಳನ್ನವಲಂಬಿಸಿ ಬ್ಯಾಂಕು ಇನ್ನೂ ಕೆಲವು ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಅದು ಮೋಟಾರು ವಾಹನವಾಗಿದ್ದರೆ, ಮೋಟಾರು ವಾಹನದ ಶಾಸನದನ್ವಯ ಬ್ಯಾಂಕಿನ ಹೆಸರಿನಲ್ಲಿ ಪ್ರಭಾರವನ್ನು ನೋಂದಾಯಿಸಬೇಕು. ಪುಸ್ತಕ ಋಣಗಳಾದರೆ ಸಾಲಗಾರನ ಋಣಿಗಳ ದಾಖಲೆಗಳಲ್ಲಿ ಬ್ಯಾಂಕಿನ ಪ್ರಭಾರವನ್ನು ನೋಂದಾಯಿಸಬೇಕು. ಕಾಫಿ ಬೆಳೆಯಾದರೆ ಕಾಫಿ ಬೋರ್ಡಿನಿಂದ ಸಾಲಗಾರನಿಗೆ ಸಲ್ಲತಕ್ಕ ಹಣವನ್ನು ಬ್ಯಾಂಕಿಗೇ ನೀಡುವಂತೆ ಸಾಲಗಾರ ಕಾಫಿ ಬೋರ್ಡಿಗೆ ನಿರ್ದೇಶಿಸುವಂತೆ ಏರ್ಪಡಿಸಬೇಕು. ತೋರಾಧಾರವು ಕಂಪನಿಗಳ ಅಧಿನಿಯಮದನ್ವಯ ಕಡ್ಡಾಯವಾಗಿ ನೋಂದಾಯಿಸಬೇಕಾದ ಪ್ರಭಾರಗಳ ಪಟ್ಟಿಯಲ್ಲಿ ನಮೂದಿತವಾಗಿದ್ದರೂ ಅದರ ಸಂಬಂಧದ ಹಕ್ಕುಗಳನ್ನು ಯಾವ ಶಾಸನದಡಿಯೂ ನಿರೂಪಿಸಲಾಗಿಲ್ಲ. ಆದರೆ ಒಮ್ಮೆ ತೋರಾಧಾರದ ವಸ್ತು ಬ್ಯಾಂಕಿನ ವಶಕ್ಕೆ ಒಳಪಟ್ಟ ಮೇಲೆ ಅದನ್ನು ಒತ್ತೆಗೊಳಗಾದ ಪ್ರತಿಭೂತಿಯೆಂದೇ ಪರಿಗಣಿಸಿ ಆ ಸಂಬಂಧದ ಎಲ್ಲಾ ಶಾಸನದತ್ತ ಹಕ್ಕುಗಳನ್ನು ಬ್ಯಾಂಕು ಚಲಾಯಿಸಬಹುದು.

### ನಿಯೋಜನೆ

ಸಾಲಗಾರ ತನಗೆ ಸಲ್ಲತಕ್ಕ ಹಣವನ್ನು ಸ್ವೀಕರಿಸುವ ಹಕ್ಕನ್ನು ಬ್ಯಾಂಕಿನ ಹೆಸರಿಗೆ ವರ್ಗಾಯಿಸಿದರೆ ಅದು ನಿಯೋಜನೆ ಎನಿಸಿಕೊಳ್ಳುತ್ತದೆ. ಕಂಪನಿಗಳ ಷೇರುಗಳು ಮತ್ತು ಜೀವವಿಮಾ ಪಾಲಿಸಿಗಳು ಮುಂತಾದವುಗಳನ್ನು ಈ ರೀತಿ ನಿಯೋಜಿಸಬಹುದು. ಸದರಿ ಸಂಸ್ಥೆಗಳಲ್ಲಿ ಬ್ಯಾಂಕಿನ ವರ್ಗಾಯಿತ ಹಕ್ಕನ್ನು ನೋಂದಾಯಿಸಬೇಕಾಗುತ್ತದೆ. ಇದಕ್ಕೆ ಜೀವವಿಮಾ ಅಧಿನಿಯಮ ಮತ್ತು ಕಂಪನಿಗಳ ಅಧಿನಿಯಮಗಳಲ್ಲಿ ಅವಕಾಶ ಮಾಡಲಾಗಿದೆ. ಯಾವುದೇ ಸಮಯದಲ್ಲಿ ಬ್ಯಾಂಕು ಪ್ರತಿಭೂತಿಗೊಳಗಾದ ಷೇರುಗಳನ್ನು ಮಾರಾಟ ಮಾಡಬಹುದು ಅಥವಾ ಜೀವವಿಮಾ ಪಾಲಿಸಿಯಾದರೆ ಅದನ್ನು ಜೀವವಿಮಾ ಕಾರ್ಪೋರೇಷನ್ನಿಗೆ ಒಪ್ಪಿಸಿ ಅದರ ತ್ಯಾಗದ ಬೆಲೆಯನ್ನು ಪಡೆಯಬಹುದು.

ಮೇಲೆ ಹೇಳಿದ ಪ್ರತಿಭೂತಿಗಳಲ್ಲದೆ ಕೆಲವು ಮುಂಗಡಗಳನ್ನು ಚೆಕ್ ಹುಂಡಿ ಸರಕಿನ ಹಕ್ಕುಪತ್ರದ ಜೊತೆಯಲ್ಲಿ ಅಥವಾ ಇಲ್ಲದೆಯೇ ಮೊದಲಾದ ಪರಕ್ರಾಮ್ಯ ಸಂಲೇಖಗಳ ಆಧಾರದ ಮೇಲೆ ನೀಡಲಾಗುತ್ತದೆ. ಆ ಸಂಲೇಖಗಳನ್ನು ಬ್ಯಾಂಕಿನ ಹೆಸರಿಗೆ ಪರಕ್ರಾಮಿಸುವುದರಿಂದ ಮತ್ತು ಸರಕಿನ ಹಕ್ಕು ಪತ್ರಗಳನ್ನು ಬ್ಯಾಂಕಿನ ಹೆಸರಿನಲ್ಲೇ ರಚಿಸುವುದರಿಂದ ಅವುಗಳಿಗೆ ಸಂದಾಯವಾಗತಕ್ಕ ಹಣವನ್ನು ಪಡೆಯುವುದಕ್ಕೂ, ಸರಕುಗಳನ್ನು ವಶಕ್ಕೆ ತೆಗೆದುಕೊಂಡು ಮಾರಾಟ ಮಾಡುವುದಕ್ಕೂ ಬ್ಯಾಂಕಿಗೆ ಹಕ್ಕು ಒದಗುತ್ತದೆ. ●

*ಬ್ಯಾಂಕಿಂಗ್ ಪ್ರಪಂಚ – ಅಕ್ಟೋಬರ್ ೧೯೮೩*

# ಭಾರತದಲ್ಲಿ ಸೆಂಟ್ರಲ್ ಬ್ಯಾಂಕಿನ ವಿಕಾಸ – ಬಿ. ರಾಮರಾವ್

ಬೆಂ. ಶ್ರೀ. ರವೀಂದ್ರ

೧೯೪೯ ರಿಂದ ಏಳೂವರೆ ವರ್ಷಗಳ ಕಾಲ ರಿಸರ್ವ್ ಬ್ಯಾಂಕಿನ ಅಧ್ಯಕ್ಷರಾಗಿದ್ದ ಬಿ. ರಾಮರಾವ್ ಅವರು ೧೯೬೦ರ ಏಪ್ರಿಲ್ ೧೮, ೨೦ ಮತ್ತು ೨೨ ರಂದು ಮದರಾಸು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ದತ್ತಿ ಉಪನ್ಯಾಸಗಳನ್ನು ನೀಡಿದರು. ಈ ಉಪನ್ಯಾಸ ಮಾಲೆಯನ್ನು ಪುಸ್ತಕ ರೂಪದಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ ವಿಶ್ವವಿದ್ಯಾಲಯ ಮಟ್ಟದ ಪಠ್ಯ ಗ್ರಂಥಗಳನ್ನು ಪ್ರಕಟಿಸುವ ಭಾರತ ಸರ್ಕಾರದ ಸಮಾಜ ಕಲ್ಯಾಣ ಮತ್ತು ಶಿಕ್ಷಣ ವಿಭಾಗದ ಯೋಜನೆಯ ಅನ್ವಯ ಪ್ರಕಟಿಸಲಾಗಿದೆ. ಕನ್ನಡವನ್ನು ವಿವಿಧ ಹಂತಗಳಲ್ಲಿ ಕಾಲೇಜು ಹಾಗೂ ಸ್ನಾತಕೋತ್ತರ ವರ್ಗಗಳಲ್ಲಿ ಅವಶ್ಯಕವಾದ ಪಠ್ಯ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಮಾಧ್ಯಮವನ್ನಾಗಿ ಪರಿವರ್ತಿಸುವ ಉದ್ದೇಶದಿಂದ (ಹಾರ್ವೆಕೆ-ಕುಲಪತಿ ಆರ್.ಸಿ. ಹಿರೇಮಠ) ರೂಪುಗೊಂಡ ಈ ಪಠ್ಯಗ್ರಂಥ ಪ್ರೌಢ ವ್ಯಾಸಂಗ ಹಾಗೂ ಸಂಶೋಧನೆಯ ಪರಿಣಾಮಗಳನ್ನು ಕನ್ನಡ ಮಕ್ಕಳಿಗೆ ತಾಯ್ನುಡಿಯಲ್ಲಿ ನೀಡಲು, ಆಧುನಿಕ ಜ್ಞಾನವನ್ನು ಜನಸಾಮಾನ್ಯರತ್ತ ಹರಿಸಲು ನೆರವಾಗುವ ತನ್ನ ಗುರಿಯಲ್ಲಿ ಯಶಸ್ವಿಯಾಗಿದೆ.

ಮೂರು ಅಧ್ಯಾಯಗಳಲ್ಲಿ ಭಾರತದ ಕೇಂದ್ರ ಬ್ಯಾಂಕು ರೂಪುಗೊಂಡ ರೀತಿಯನ್ನು, ಯೂರೋಪ್, ಇಂಗ್ಲೆಂಡ್‌ಗಳ ಕೇಂದ್ರ ಬ್ಯಾಂಕುಗಳಿಗಿಂತ ಭಿನ್ನವಾದ ರೀತಿಯಲ್ಲಿ ವಿಕಾಸಗೊಂಡಿದ್ದನ್ನು, ಭಾರತದ ಪ್ರಗತಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ರೀತಿಯನ್ನು, ಸ್ವಾನುಭವ ಮತ್ತು ಆಳವಾದ ಪಾಂಡಿತ್ಯದಿಂದ ಅಧಿಕಾರಯುಕ್ತವಾದ ಮಾತುಗಳಲ್ಲಿ ರಾಮರಾವ್ ಅವರು ವಿವರಿಸಿದ್ದಾರೆ.

೧೯೩೪ ರಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ವಿಧೇಯಕ ಅಂಗೀಕೃತವಾಯಿತು. ಆದರೆ ಇಂಥ ಕೇಂದ್ರ ಬ್ಯಾಂಕಿನ ಉಗಮಕ್ಕಾಗಿ ಪ್ರಯತ್ನಗಳು ೧೯೨೬ ರಲ್ಲಿಯೇ ಆರಂಭಗೊಂಡವು. ಆರ್ಥಿಕ ಸಮತೋಲವನ್ನು ಸದೃಢ ತನ್ನತನವನ್ನು ಸುಸ್ಥಿತಿಯಲ್ಲಿ ಕಾಯ್ದುಯಕೊಳ್ಳುವ ಅದರಂತೆ ದೇಶದ ಹಣಕಾಸು ವ್ಯವಸ್ಥೆಯನ್ನು ನಿಯಂತ್ರಿಸುವ ಉದ್ದೇಶದಿಂದ ಆರಂಭಗೊಂಡ ಬ್ಯಾಂಕಿನ ಸಂವಿಧಾನ ಪಶ್ಚಿಮ ಯೂರೋಪಿನ ಮಧ್ಯವರ್ತಿ ಬ್ಯಾಂಕಿನ ಸ್ವರೂಪಗಳಿಗೆ ಅನುಗುಣವಾಗಿತ್ತು. ಪ್ರಾಚೀನ ಅವಶ್ಯಕತೆಗಳನ್ನು ಪೂರೈಸಲು ಮಾತ್ರ ಶಕ್ತವಾಗಿದ್ದ ಭಾರತೀಯ ಬ್ಯಾಂಕಿಂಗ್ ವ್ಯವಸ್ಥೆ ಆಧುನಿಕ ಅಗತ್ಯಗಳನ್ನು ಪೂರೈಸಲು ಸಿದ್ಧವಾಗಬೇಕಿತ್ತು. ದ್ವಿತೀಯ ವಿಶ್ವ ಸಮರದ ಮುನ್ನಿನ ಮತ್ತು ಅನಂತರದ ಕಾಲ ಆಧುನಿಕ ಭಾರತೀಯ ಬ್ಯಾಂಕಿನ ರೂಪರೇಷೆಗಳ ಪ್ರಯೋಗಾತ್ಮಕ ಕಾಲವಾಗಿತ್ತು ಎಂದು ನಾವು ಭಾವಿಸಬಹುದು. ಈ ಪ್ರಯೋಗದ ವಿವಿಧ ಹಂತಗಳನ್ನು ಉಪನ್ಯಾಸಕಾರರು ನಿರೂಪಿಸುತ್ತಾರೆ. ೧೯೪೯ರ ಬ್ಯಾಂಕಿಂಗ್ ಕಂಪನಿಗಳ ನಿಯಂತ್ರಣ ಆಜ್ಞೆ ಒಂದು ನಿರ್ಣಾಯಕ ಘಟ್ಟ ಎನ್ನಬಹುದು. ಈ ಕಾಯ್ದೆಯು ಬ್ಯಾಂಕುಗಳನ್ನು ನಿಯಂತ್ರಿಸುವ ರಿಸರ್ವ್ ಬ್ಯಾಂಕಿಗೆ ವಿಸ್ತೃತ ಅಧಿಕಾರವನ್ನು ತಂದು ಕೊಟ್ಟಿತು. ಬ್ಯಾಂಕುಗಳನ್ನು ಸ್ಥಾಪಿಸುವ ಅಧಿಕಾರ, ಹೊಸ ಶಾಖೆಗಳನ್ನು ತೆರೆಯಲು ಪರವಾನಗಿ ನೀಡುವುದು, ರಿಸರ್ವ್ ಬ್ಯಾಂಕ್ ನೀಡುವ ಆದೇಶಗಳನ್ನು ಪಾಲಿಸುವುದು – ಇವು ಈ ಅಧಿನಿಯಮದ ಮುಖ್ಯ ಅಂಶಗಳು. ಬ್ಯಾಂಕುಗಳಿಗೆ ಭದ್ರತೆ ಮತ್ತು ಗ್ರಾಹಕರ ನಂಬಿಕೆಗೆ ಪಾತ್ರವಾದ ಗೌರವಾನ್ವಿತ ಸ್ಥಾನವನ್ನು ದೊರಕಿಸಲು ರಿಸರ್ವ್ ಬ್ಯಾಂಕು ಜಾರಿಗೆ ತಂದ ಸಂಶೋಧನಾ ಪದ್ಧತಿ ಹಾಗೂ ನುರಿತ ನೌಕರರ ತಂಡ ರಚನೆಗಾಗಿ ನಿರ್ಮಾಣವಾದ ಬ್ಯಾಂಕರುಗಳ ಕಾಲೇಜಿನ ಬಗ್ಗೆ ಶ್ರೀ ರಾಮರಾವ್ ಅವರು ಪ್ರಸ್ತಾಪಿಸುತ್ತಾರೆ. ಅಭಿವೃದ್ಧಿ ಹೊಂದದ ದೇಶದಲ್ಲಿ ಸಾಲ ಸೌಲಭ್ಯ ಸಾಮಾನ್ಯವಾಗಿ ವ್ಯಾಪಾರಕೇಂದ್ರ, ಪಟ್ಟಣ, ಅರೆಪಟ್ಟಣಗಳಲ್ಲಿ ಮಾತ್ರ ದೊರೆಯುತ್ತದೆ. ಸಾಮಾಜಿಕ ಬ್ಯಾಂಕಿಂಗು ತನ್ನ ಉದ್ದೇಶಗಳಲ್ಲಿ ಒಂದಾಗಿಸಿದ ರಿಸರ್ವ್ ಬ್ಯಾಂಕು, ಬ್ಯಾಂಕಿಂಗ್ ಸೌಲಭ್ಯಗಳ ವಿಸ್ತರಣೆಗೂ ಕ್ರಮ ಕೈಗೊಂಡಿತು. ೧೯೫೧ ರಲ್ಲಿ ನೇಮಕವಾದ ಸರ್ ಪುರುಷೋತ್ತಮ ದಾಸ್ ಠಾಕೂರರ ಗ್ರಾಮೀಣ ಮತ್ತು ಪರಿಶೀಲನಾ ಸಮಿತಿ ಇಂಪೀರಿಯಲ್ ಬ್ಯಾಂಕಿನ ರಾಷ್ಟ್ರೀಕರಣಕ್ಕೆ ಕರೆ ನೀಡಿತು. ರಿಸರ್ವ್ ಬ್ಯಾಂಕು ಅಸ್ತಿತ್ವಕ್ಕೆ ಬರುವ ಮುನ್ನ ಒಂದು ರೀತಿಯಲ್ಲಿ ಕೇಂದ್ರ ಬ್ಯಾಂಕಿನ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದ ಇಂಪೀರಿಯಲ್ ಬ್ಯಾಂಕನ್ನು ೧೯೫೫ ರಲ್ಲಿ ರಾಷ್ಟ್ರೀಕರಿಸಲಾಯಿತು. ಇದರಿಂದ ಕಾಲ ವಿಸ್ತರಣೆಗೆ ಅವಕಾಶ ಹೆಚ್ಚಾಯಿತು.

ಉಬ್ಬರ ಮತ್ತು ಧನ ಧೋರಣೆ, ಯುದ್ಧಕಾಲದಲ್ಲಿ ಮತ್ತು ನಂತರದಲ್ಲಿ ಉಬ್ಬರ – ಎಂಬ ಎರಡನೆಯ ಉಪನ್ಯಾಸದಲ್ಲಿ ರಾಮರಾವ್ ಅವರು ಜಾಗತಿಕ ಯುದ್ಧ ಭಾರತೀಯ ಆರ್ಥಿಕ ವ್ಯವಸ್ಥೆಯ ಮೇಲೆ ಬೀರಿದ ಪರಿಣಾಮವನ್ನು ವ್ಯಾಪಕವಾಗಿ ಚರ್ಚಿಸುತ್ತಾರೆ. ಸಾಮ್ರಾಜ್ಯಶಾಹಿಗಳಿಂದ ಯುದ್ಧೋದ್ದೇಶದ

ಆರ್ಥಿಕ ತಂತ್ರದಿಂದಾಗಿ ಬೆಲೆಗಳು ಬಹಳ ಏರಿದವು. ಭಾರತೀಯ ರೂಪಾಯಿ ಇಂಗ್ಲೆಂಡಿನ ಸ್ಟರ್ಲಿಂಗಿಗೆ ಹೊಂದಿಕೊಂಡಿದ್ದು, ಔದ್ಯಮಿಕ ಉತ್ಪಾದನೆಯಲ್ಲಿ ಯುದ್ಧಸಾಮಗ್ರಿಗಳಿಗೆ ಪ್ರಾಶಸ್ತ್ಯ ದೊರೆತಿದ್ದು, ಗ್ರಾಹಕ ವಸ್ತುಗಳ ಉತ್ಪನ್ನ ಕ್ಷೀಣಿಸಿದ್ದು, ಸಾಗಣೆಯಲ್ಲಿ ತೊಡಕು, ಸರಕಾರದ ಆದಾಯ ವೆಚ್ಚದ ನಡುವಿನ ಖೋತಾ ಪರಿಸ್ಥಿತಿ ಮುಂತಾದವು ಉಬ್ಬರ ಸ್ಥಿತಿಗೆ ಕಾರಣವಾದವು. ಈ ಹಿನ್ನೆಲೆಯಲ್ಲಿ ಸ್ಟರ್ಲಿಂಗಿನ ಮೌಲ್ಯ ಕೂಡ ಕುಸಿಯುತ್ತಿದ್ದುದರಿಂದ ಅನಿವಾರ್ಯವಾಗಿ ಅದರೊಂದಿಗೆ ಭಾರತೀಯ ರೂಪಾಯಿ ಕೂಡ ೧೯೪೯ ರಲ್ಲಿ ಅಪಮೌಲ್ಯಗೊಂಡಿತು. ರಿಸರ್ವ್ ಬ್ಯಾಂಕು ತನ್ನ ಅಧಿಕಾರವನ್ನು ಬಳಸಿ ಮುಂಗಡ ನಿಯಂತ್ರಣ, ವಿದೇಶೀ ವಿನಿಮಯದ ಮೇಲೆ ಹಿಡಿತ, ಬಡ್ಡಿ ದರ ವ್ಯತ್ಯಾಸ (೧೯೫೧ ರಲ್ಲಿ ಪ್ರಥಮ ಬಾರಿಗೆ ಶೇ. ೩ ರಿಂದ ೩.೫ ವರೆಗೆ ಏರಿಕೆ) ಬ್ಯಾಂಕ್ ಉದರಿಯ ಬಗ್ಗೆ ಬಿಗಿ ಧೋರಣೆ ಮುಂತಾದ ಕಾರ್ಯಕ್ರಮಗಳನ್ನು ರೂಪಿಸಿತು. ಆರ್ಥಿಕ ವಲಯ ಉತ್ಪಾದನಾ ವಲಯಗಳಲ್ಲಿ ಬ್ಯಾಂಕ್ ಬಡ್ಡಿಯ ದರದ ವ್ಯತ್ಯಾಸದಿಂದಾಗುವ ಪರಿಣಾಮಗಳ ಬಗ್ಗೆ ರಾಮರಾವ್ ವಿವರಿಸುತ್ತಾರೆ. ದಿನ ದಿನ ಹೆಚ್ಚುತ್ತಿದ್ದ ಜನಸಂಖ್ಯೆ ಯೋಜನಾ ವೆಚ್ಚ, ರಕ್ಷಣಾ ವೆಚ್ಚ ಇವು ಹೊಸ ರಾಷ್ಟ್ರದಲ್ಲಿ ಅತಿಪ್ರಸರಣಕ್ಕೆ ಕಾರಣವಾದವು.

ತಮ್ಮ ಮೂರನೆಯ ಉಪನ್ಯಾಸದಲ್ಲಿ ಲೇಖಕರು ವ್ಯವಸಾಯ ಉದರಿ ಮತ್ತು ಗ್ರಾಮೀಣ ಸಹಕಾರಿ ಸಂಘಗಳ ಹುಟ್ಟು ಮತ್ತು ಬೆಳವಣಿಗೆಯಲ್ಲಿ ರಿಸರ್ವ್ ಬ್ಯಾಂಕ್ ವಹಿಸಿದ ಪಾತ್ರದ ಬಗ್ಗೆ ತಿಳಿಸುತ್ತಾರೆ. ಭಾರತದಲ್ಲಿ ಸಹಕಾರಿ ಚಳವಳಿ ೧೯೦೧ ರಲ್ಲಿಯೇ ಆರಂಭವಾಯಿತು. ಅನೇಕ ಶ್ರದ್ಧಾವಂತ ಕಾರ್ಯಕರ್ತರು ಈ ಆಂದೋಲನದಲ್ಲಿ ಭಾಗವಹಿಸಿದ್ದರೂ ೫೦ ವರುಷಗಳ ಅನಂತರವೂ ಈ ಸಂಘಗಳಿಂದ ಕೇವಲ ೩ ರಷ್ಟು ಮಾತ್ರ ಕೃಷಿ ಉದರಿ ಸೌಕರ್ಯ ವಿಸ್ತರಣಗೊಂಡಿತು. ಭಾರತೀಯ ಸಾಮಾಜಿಕ ವ್ಯವಸ್ಥೆ, ನಗರದಲ್ಲಿ ಆಡಳಿತ ಉದ್ಯಮದ ಕೇಂದ್ರೀಕರಣ, ವಸಾಹತು ಆಡಳಿತ ಮುಂತಾದ ಕಾರಣಗಳನ್ನು ಸಹಕಾರಿ ಆಂದೋಲನದ ವಿಫಲತೆಗೆ ಉಪನ್ಯಾಸಕರು ನೀಡುತ್ತಾರೆ. ಸಹಕಾರಿ ಆಂದೋಲನವನ್ನು ಪುನರ್ ಸಂಘಟಿಸಿ ಚೈತನ್ಯ ಯುಕ್ತವನ್ನಾಗಿ ಮಾಡುವ ದೃಷ್ಟಿಯಿಂದ ರಿಸರ್ವ್ ಬ್ಯಾಂಕು ಗ್ರಾಮೀಣ ಬ್ಯಾಂಕಿಂಗ್ ವಿಚಾರಣಾ ಸಮಿತಿಯ ಶಿಫಾರಸ್ಸಿಗೆ ಅನುಗುಣವಾಗಿ ೧೯೫೧ ರಲ್ಲಿ ವ್ಯಾಪಕ ಸಮೀಕ್ಷೆಯನ್ನು ನಡೆಸಲು ತಜ್ಞರ ಸಮಿತಿಯನ್ನು ನೇಮಕ ಮಾಡಿತು. ಆರ್ಥಿಕ ನೆರವು, ದಕ್ಷ ಸಿಬ್ಬಂದಿಯ ಸಲಹೆ, ಉಸ್ತುವಾರಿ ಮತ್ತು ಸರಕಾರಿ ಆಡಳಿತದ ಕ್ರಮಗಳನ್ನು ಕೈಗೊಳ್ಳಲಾಯಿತು. ಗ್ರಾಮೀಣ ಆರ್ಥಿಕ ವ್ಯವಹಾರದ ಹೆಚ್ಚು ಭಾಗವನ್ನು ಸಹಕಾರಿ ತತ್ವದ ಮೇಲೆ ಸಂಘಟಿಸುವ ಉದ್ದೇಶ ಈ ಪ್ರಯತ್ನಗಳಿಗಿತ್ತು. ಆದರೆ ರಿಸರ್ವ್ ಬ್ಯಾಂಕು ನಮ್ಮ ಸಾಮಾಜಿಕ ರಚನೆಯನ್ನು ಗಮನಿಸಿ ಸಹಕಾರಿ ಬೇಸಾಯಕ್ಕೆ ಹೆಚ್ಚು ಒತ್ತು ಕೊಡಲಿಲ್ಲ.

ಔದ್ಯಮಿಕ ಉದ್ದೇಶಗಳಿಗಾಗಿ ದೀರ್ಘಾವಧಿ ಸಾಲಗಳನ್ನು ನೀಡಲು ಭಾರತೀಯ ಬ್ಯಾಂಕುಗಳು ಅಷ್ಟು ಉತ್ಸುಕವಾಗಿ-ರಲಿಲ್ಲವಾದ ಕಾರಣ ಭಾರತೀಯ ಕೈಗಾರಿಕಾ ಹಣಕಾಸು ನಿಗಮದ ರಚನೆ ೧೯೪೮ ರಲ್ಲಿ ಆಯಿತು. ರಿಸರ್ವ್ ಬ್ಯಾಂಕು ನಿಗಮದ ಬಂಡವಾಳದ ಐದನೆಯ ಒಂದಂಶವನ್ನು ನೀಡಿದ್ದೇ ಅಲ್ಲದೆ ರಚನಾತ್ಮಕ ನೆರವನ್ನು ಕೂಡ ಮಾಡಿತು. ಅಲ್ಲದೆ ರಾಜ್ಯದ ಹಣಕಾಸು ನಿಗಮಗಳ ಸ್ಥಾಪನೆ, ಅವುಗಳ ಆಡಳಿತದಲ್ಲಿ ಭಾಗ, ಸಣ್ಣ ಉದ್ಯಮಗಳಿಗೆ ರಾಜ್ಯ ಹಣಕಾಸು ನಿಗಮದ ಮೂಲಕ ಸಾಲ ಮುಂತಾದ ಯೋಜನೆಗಳನ್ನು ಬ್ಯಾಂಕು ರೂಪಿಸಿತು.

ರಿಸರ್ವ್ ಬ್ಯಾಂಕಿನ ಆರಂಭಿಕ ದಿನಗಳ ಬೆಳವಣಿಗೆಯ ಪರಿಚಯವನ್ನು ಈ ಪುಸ್ತಕ ಯಶಸ್ವಿಯಾಗಿ ಮಾಡಿಕೊಡುತ್ತದೆ. ಅಲ್ಲದೆ ಕ್ಲಿಷ್ಟ ವಿಷಯಗಳನ್ನು ಕನ್ನಡದಲ್ಲಿ ಸ್ಪಷ್ಟವಾಗಿ ಖಚಿತವಾಗಿ ಹೇಳಬಹುದು ಎಂಬುದನ್ನು ಅನುವಾದಕರು ತೋರಿಸಿದ್ದಾರೆ. ಈ ದಿಸೆಯಲ್ಲಿ ಪ್ರಕಾಶಕರ ಉದ್ದೇಶ ಸಫಲವಾಗಿದೆ. ●

*ಬ್ಯಾಂಕಿಂಗ್ ಪ್ರಪಂಚ – ಅಕ್ಟೋಬರ್ ೧೯೮೩*